ಉಪನ್ಯಾಸ
ಗ್ರಂಥಮಾಲೆ

೨೦೫.

ಅನುಭಾವಿ ಕವಿ

# ಕಡಕೋಳ ಮಡಿವಾಳಪ್ಪ

ಶ್ರೀ ಲಿಂಗಣ್ಣ ಸತ್ಯಂಪೇಟೆ




ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಮೇ, ೧೯೭೫

ರಜತ ಮಹೋತ್ಸವದ ಪ್ರಕಟಣೆ

ಉಪನ್ಯಾಸ ಗ್ರಂಥಮಾಲೆ

೨೦೫

# ಅನುಭಾವಿ ಕವಿ
# ಕಡಕೋಳ ಮಡಿವಾಳಪ್ಪ

ಶ್ರೀ ಲಿಂಗಣ್ಣ ಸತ್ಯಂಪೇಟೆ




ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ

ಮೇ, ೧೯೭೫



# ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯವು ತನ್ನ ವ್ಯಾಸಂಗ ವಿಸ್ತರಣ ಹಾಗೂ ಪ್ರಕಟನ ಶಾಖೆಯ ಮುಖಾಂತರ ಕೈಕೊಂಡು ನಡೆಸುತ್ತಿರುವ ಜ್ಞಾನ ಪ್ರಸಾರದ ಯೋಜನೆಗಳಲ್ಲಿ ಈ 'ಉಪನ್ಯಾಸ ಗ್ರಂಥಮಾಲೆ' ಅತ್ಯಂತ ಮುಖ್ಯವೂ, ಜನಪ್ರಿಯವೂ ಆಗಿರುವದು ಹೆಮ್ಮೆಯ ಮಾತಾಗಿದೆ. ವಿಶ್ವವಿದ್ಯಾಲಯದ ಆಡಳಿತ ಕ್ಷೇತ್ರದಲ್ಲಿರುವ ಎಂಟು ಜಿಲ್ಲೆಗಳಲ್ಲಿಯೂ ಉಪನ್ಯಾಸ ಶಿಬಿರಗಳನ್ನು ಏರ್ಪಡಿಸಲಾಗುತ್ತಿದ್ದು, ವಿಶ್ವವಿದ್ಯಾಲಯದ ಮತ್ತು ಇದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ, ವಿಜ್ಞಾನ, ಸಾಮಾಜಿಕ ಶಾಸ್ತ್ರ ಮೊದಲಾದ ಶಾಖೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಆಯ್ದುಕೊಂಡು, ಶಾಸ್ತ್ರಸಮ್ಮತವಾದ ಸರಣಿಯಲ್ಲಿ, ಜನಸಾಮಾನ್ಯರಿಗೆ ತಿಳಿಯುವ ಶೈಲಿಯಲ್ಲಿ ಈ ಶಿಬಿರಗಳಲ್ಲಿ ಉಪನ್ಯಾಸಗಳನ್ನು ಕೊಡುತ್ತಾರೆ. ವಿಶ್ವವಿದ್ಯಾಲಯದ ಜ್ಞಾನ ಭಾಂಡಾರದ ಅಲ್ಪಾಂಶವನ್ನಾದರೂ ಮಹಾಜನರ ಮನೆಬಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನಿರೀಕ್ಷೆಗೆ ಮೀರಿದ ಮೆಚ್ಚಿಕೆಯೂ, ಪ್ರೋತ್ಸಾಹವೂ ದೊರೆಯುತ್ತಿವೆ. ಜನರು ತಾವಾಗಿಯೇ ಮುಂದೆ ಬಂದು ತಮ್ಮ ತಮ್ಮ ಊರುಗಳಲ್ಲಿ ಈ ಉಪನ್ಯಾಸ ಮಾಲೆಗಳನ್ನು ಏರ್ಪಡಿಸಲು ವಿಶ್ವವಿದ್ಯಾಲಯಕ್ಕೆ ಬರೆದು ಬಿನ್ನವಿಸಿಕೊಳ್ಳುತ್ತಿರುವುದು ನಿಜವಾಗಿಯೂ ಸಂತೋಷದ ಸಂಗತಿಯಾಗಿದೆ.

ಈ ಜ್ಞಾನ ಪ್ರಸಾರ ಕಾರ್ಯದಲ್ಲಿ ಭಾಗವಹಿಸುವದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕ ಒದಗುವ ದಲ್ಲದೆ ಎಂತಹ ವಿಷಯವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭ ಶೈಲಿಯಲ್ಲಿ ಬರವಣಿಗೆ ಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನಮುಟ್ಟಿ ಸಹಕರಿಸುತ್ತಿರುವದು ಶ್ಲಾಘ ನೀಯ.

ಈ ಮಾಲೆಯಲ್ಲಿ ಈಗಾಗಲೇ ೨೦೪ ಪುಸ್ತಕಗಳು ಪ್ರಕಟ ವಾಗಿವೆ ಅವು ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಕ ಗಳು ನಾಲ್ಕು-ಐದು ಮುದ್ರಣಗಳನ್ನು ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ, ಜನಪ್ರಿಯತೆಯನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖ ಪ್ರಗತಿ ಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
ದಿ. ೨-೫-೧೯೭೫

ಆರ್. ಸಿ. ಹಿರೇಮಠ
ಕುಲಪತಿ

# ಅರಿಕೆ

ನನಗೆ ಸಾಹಿತ್ಯದತ್ತ ಒಲವು ಮೂಡಿ, ಅದರಲ್ಲೂ ವಚನ ಸಾಹಿತ್ಯದ ವೀರಶೈವ ಮಾರ್ಗದಲ್ಲಿ ಆಸಕ್ತಿ ಉಂಟಾಗುವುದಕ್ಕೆ ಧಾರವಾಡದ ಪೂಜ್ಯ ಲಿಂ. ಮೃತ್ಯುಂಜಯ ಮಹಾಸ್ವಾಮಿಗಳು ಹೇಗೋ ಹಾಗೆಯೇ ನನ್ನ ತಂದೆ ಗುರಪ್ಪ ಹುಗ್ಗಿ ಅವರೂ ಕಾರಣರಾಗಿದ್ದಾರೆ.

ಹೈದ್ರಾಬಾದ ಕರ್ನಾಟಕದ ತುಂಬ ಈಗ್ಗೆ ಒಂದು ದಶಕದ ಹಿಂದೆ ತಮ್ಮ ಬೆಳಕಿನ ಹೆಜ್ಜೆ ಇಟ್ಟು ಹೋದ ಲಿಂ. ವಿಶ್ವಾರಾಧ್ಯರ ಕೃಪಾ ಪಾತ್ರರಾದ ನನ್ನ ತಂದೆಯವರು ಅನುಭಾವಿ ಕವಿಗಳೂ, ಶರಣ ಧರ್ಮಿಗಳೂ ಆಗಿರುವುದರಿಂದ ನನಗೆ ಬಾಲ್ಯದಿಂದಲೂ ಅವರ ವ್ಯಕ್ತಿತ್ವದ ಪ್ರಭಾವ ಉಂಟಾದುದು.ಸಹಜವೇ ಆಗಿದೆ. ಅಲ್ಲದೆ, ಅವರಿಂದಲೇ ಅನುಭಾವಿ ಕವಿ ಶರಣರ ಬಗೆಗೆ ನನ್ನಲ್ಲಿ ಅಭಿಮಾನ ಆಸಕ್ತಿ ಒಡಮೂಡಿಕೊಂಡಿವೆ.

ಕಡಕೋಳ ಮಡಿವಾಳಪ್ಪನವರ ಬಗೆಗೆ ನಾನು ತೀವ್ರವಾದ ಅಭಿಲಾಷೆ ಅಭಿಮಾನ ತಾಳುವಂತಾದುದಕ್ಕೆ ಪ್ರಾಯಶಃ ಈ ಹಿನ್ನೆಲೆಯೇ ಪ್ರಮುಖವಾಗಿರಬೇಕು. ಅವರ "ಇನ್ನೇನಿನ್ನೇನೋ| . ಇನ್ನೇನಿನ್ನೇನೋ" ಎಂಬ ಹಾಡು ಐದಾರು

ವರ್ಷಗಳ ಹಿಂದೆ ನನ್ನ ಮನಸೆಳೆಯಿತು. ಅದರಿಂದಾಗಿ ಆ ಮಹಾಜೀವ ಬದುಕಿದ ಬಗೆಯನ್ನು ತಿಳಿದುಕೊಳ್ಳ ಬೇಕೆನಿಸಿತು. ಅದರ ಫಲಶೃತಿಯೋ ಈ ಹೊತ್ತಿಗೆ.

ಇದು ಸಿದ್ಧವಾಗುವುದಕ್ಕೆ ಹಲವರು ಹಲವಾರು ರೀತಿ ಯಿಂದ ಉಪಕಾರ ಮಾಡಿದ್ದಾರೆ. ಕಲಬುರ್ಗಿಯ ಪೂಜ್ಯ ಶ್ರೀ ಶರಣಬಸವಪ್ಪ ಅಪ್ಪ, ಎಂ. ಎ. ಅವರು ಚಿಣಮಗೇರಿಗೆ ಹೋಗಿ ನಾನು ಹಾಡು ಸಂಗ್ರಹಿಸಲು ಟೇಪುರಿಕಾರ್ಡ ಒದಗಿಸಿ ಕೊಟ್ಟದ್ದಲ್ಲದೆ ನನ್ನ ಜಿಜ್ಞಾಸೆ–ಚೇತನ–ಅಭಿಮಾನಗಳನ್ನು ಮತ್ತಷ್ಟು ಬಡಿದೆಬ್ಬಿಸಿದ್ದಾರೆ. ಹಿರಿಯರಾದ ಸತ್ಯಸ್ನೇಹಿ ಶಾಂತರಸರು ಎಲ್ಲ ರೀತಿಯಿಂದಲೂ ನೆರವು ನೀಡಿದ್ದಾರೆ. ಅವರ ಅಪಾರ ಸಹೃದಯತೆಗೆ ನಾನು ಕರಗಿ ಹೋಗಿದ್ದೇನೆ. ಇವರೀರ್ವರಿಗೂ ನಿಶ್ಯಬ್ದದಲ್ಲಿನಿಂತು ಭಕ್ತಿಯಿಂದ ಮಣಿ ಯುವೆ.

ಮಡಿವಾಳಪ್ಪನವರ ಚರಿತ್ರೆ ಸಂಗ್ರಹಿಸುವಲ್ಲಿ ನನ್ನಷ್ಟೇ ಕೂತೂಹಲ ತಾಳಿ ಸಹಕರಿಸಿದ ಸರ್ವಶ್ರೀ ಗುರುಬಸವಯ್ಯ ಹಿರೇಮಠ, ಕೆ. ಬಸವರಾಜ ಮಾಸ್ಟರ್, ಪ್ರೊ. ಶಿ. ಶಂ. ಬಾಣದ, ಎಂ. ಎ. ಪ್ರೊ. ಬಸವಯ್ಯ ಹಿರೇಮಠ, ಎಂ. ಎ., ಹಲವು ಸಂಗತಿ ತಿಳಿಸಿ ಉಪಕರಿಸಿದ ಗೊಬ್ಬೂರಿನ ಶ್ರೀ ಭೋಜ ರಾಯ ಗೌಡ, ಶ್ರೀ ಚನ್ನವೀರಪ್ಪ ಗವಾಯಿ, ಶ್ರೀ ಗುರು ಮಾಸ್ಟರ್ ಮಾನಸುಣಗಿ, ಶ್ರೀ ಮಡಿವಾಳಪ್ಪ ಮಾನಸುಣಗಿ ಹಾಗೂ ವೀರಯ್ಯ ಕಡಕೋಳ ಮುಂತಾದವರಿಗೆಲ್ಲ ಶರಣಾರ್ಥಿಗಳು.

ದಿನಾಂಕ ೪-೧೦-೧೯೭೪ರಂದು ರಾಯಚೂರು ಜಿಲ್ಲೆಯ 'ಯರಗೇರಿ' ಗ್ರಾಮದಲ್ಲಿ ಜರುಗಿದ ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ ಶಾಖೆಯ ೧೪೯ನೆಯ ಉಪನ್ಯಾಸ ಶಿಬಿರದಲ್ಲಿ ಉಪನ್ಯಾಸ ನೀಡುವಂತೆ ನನ್ನನ್ನು ಆಮಂತ್ರಿಸಿದ ವ್ಯಾಸಂಗವಿಸ್ತರಣ ಶಾಖೆಯ ನಿರ್ದೇಶಕರಾದ ಕವಿ ಶ್ರೀ ಚೆನ್ನವೀರ ಕಣವಿ, ಎಂ. ಎ. ಹಾಗೂ ಸಹಾಯಕ ನಿರ್ದೇಶಕರಾದ ಶ್ರೀ ಎಲ್. ಎಂ. ಗುಡ್ಡೀನ, ಎಂ. ಎ. ಅವರಿಗೆ ಅಂತಃಕರಣದ ನೆನಕೆಗಳು.

ಹಸ್ತಪ್ರತಿಯನ್ನು ಓದಿ ಸಲಹೆ ನೀಡಿದ ಸರ್ವಶ್ರೀ ಬೆಟದೂರು ಚನ್ನಬಸಪ್ಪ, ವೀರಣ್ಣಗೌಡ ನೀರಮಾನ್ವಿ, ಪ್ರಾಚಾರ್ಯ ಶ್ರೀ ಬಿ. ವ್ಹಿ. ಹಂಪನಗೌಡ್ರ, ಎಂ. ಎ., ಗುರುಬಸವಯ್ಯ ಹಿರೇಮಠ, ಪರ್ವತಯ್ಯ ಶಿವಪುರ, ಜೋಕೂರು ಮಲ್ಲನಗೌಡ, ಜಿ. ಪಿ. ವೆಂಕಟರಾಮರೆಡ್ಡಿ ಅವರಿಗೂ, ಹಸ್ತಪ್ರತಿ ಸಿದ್ಧಗೊಳಿಸವಲ್ಲಿ ಸಹಾಯಮಾಡಿದ ಶ್ರೀ ಗದ್ದಿಗಿರಾಯ ಮಾಸ್ಟರ್, ಬಿ. ಎ. ಅವರಿಗೂ ಕೃತಜ್ಞತಾಪೂರ್ವಕ ವಂದನೆಗಳನ್ನು ಸಲ್ಲಿಸುವೆ.

ಈ ಪುಸ್ತಿಕೆ ಬೇಗನೆ ಪ್ರಕಟವಾಗುವಂತೆ ಆಸಕ್ತಿಯಿಂದ ಕಾರ್ಯ ನಿರ್ವಹಿಸಿದ ಪ್ರಕಟನ ವಿಭಾಗದ ಉಪನಿರ್ದೇಶಕರಾದ ಶ್ರೀ ಎಸ್. ಬಿ. ನಾಯಕ ಅವರಿಗೂ ನನ್ನ ಕೃತಜ್ಞತೆಗಳು.

ಶಹಾಪುರ
ದಿ. ೧೧-೫-೧೯೭೫

ಲಿಂಗಣ್ಣ ಸತ್ಯಂಪೇಟೆ

# ಪರಿವಿಡಿ

# ೧. ಪೀಠಿಕೆ

ಕೃಷ್ಣೆ ಭೀಮೆಯರ ತೋಳ್ತೊಟ್ಟಿಲಲ್ಲಿ ಪವಡಿಸಿದ ನಾಡಿಗೆ ಸಗರನಾಡೆಂದು ಕರೆಯುತ್ತಾರೆ. ಪಶ್ಚಿಮಕ್ಕೆ ವಿಜಾಪುರ ಜಿಲ್ಲೆ ಪೂರ್ವಕ್ಕೆ ಎಡದೊರೆನಾಡು ಇದರ ಮೇರೆಗಳಾಗುತ್ತವೆ.

ಇದು ಹಲವು ದೃಷ್ಟಿಯಿಂದ ಮಹತ್ವಪಡೆದಿದೆ. ಇತಿಹಾಸ ಪೂರ್ವದ ಅವಶೇಷಗಳನ್ನು ಇಲ್ಲಿಯ ಏವೂರು-ನಡ್ಯಾಳ-ಶಿರವಾಳ-ಕುಳಗೇರಿ-ಮುಡ್ನೂರು-ಕೆಂಭಾವಿ-ರಾಜನಕೊಳ್ಳೂರು-ಹಗರಟಗಿ ಗ್ರಾಮಗಳಲ್ಲಿ ಕಾಣುತ್ತೇವೆ. ವೀರಗಲ್ಲು ಮಾಸ್ತಿಕಲ್ಲುಗಳು ಇಲ್ಲಿ ಹೇರಳವಾಗಿವೆ. ಗಂಗ, ಕದಂಬ, ರಾಷ್ಟ್ರಕೂಟ, ಚಾಲುಕ್ಯ, ವಿಜಯನಗರ, ಮೊಗಲ್, ಸುರಪುರ, ಕಂಪನಿ ಸರಕಾರ, ನಿಜಾಂ: ರಾಜ್ಯಮನೆತನಗಳು ಇಲ್ಲಿ ಉತ್ಕರ್ಷಕ್ಕೇರಿದ್ದುವು.

[೧]ಕವಿ ಗಮಕಿ ಸಂಗೀತಗಾರರಿಗೂ, ಶರಣ-ಸಂತ ಅನುಭಾವಿ ಕವಿಗಳಿಗೂ, ವಾಗ್ಗೇಯಕಾರರಿಗೂ ಇದು ನೆಲೆಪೀಡಾಗಿತ್ತು. ಶರಣ ಸಂಸ್ಕೃತಿಯ ಮೂಲಿಗನಾದ ದೇವರ ದಾಸಿಮಯ್ಯ, ಹಾವಿನಾಳ ಕಲ್ಲಯ್ಯ, ಸಗರ ಬ್ರಹ್ಮಯ್ಯ, ಕನ್ನೆ

೧. ಲಕ್ಷ್ಮೀಶ ಕವಿ ಇದೇ ನಾಡಿಗೆ ಸೇರಿದ ದೇವಪುರದವನು.

ಕೋಳೂರಿನ ಕೊಡಗೂಸು, ಚೆನ್ನಮ್ಮ ಎಲ್ಲ ಇಲ್ಲಿಯವರೇ. ಶರಣ ಬೆಳೆಗೆ ಇದು ಬಲು ಹದಮಾಡಿಟ್ಟ ಭೂಮಿಯೆನಿಸಿದೆ. ಕೆಂಭಾವಿಭೋಗಣ್ಣ, ಕೊಂಡಗುಳಿಯ ಕೇಶಿರಾಜ, ತಿಂಥಣಿಯ ಮೌನೇಶ್ವರ, ಸೊಲ್ಲಾಪುರದ ಕಿರಿಟೇಶ್ವರ, ಸೊನ್ನದ ಸಿದ್ಧ ಲಿಂಗಶಿವಯೋಗಿ, ಸುರಪುರದ ನಿಷ್ಠೆಯ ವೀರಪ್ಪ, ಕಡ್ಲೆಪ್ಪ, ಹೆಮ್ಮಡಿಗೆಯ ಪ್ರಭುಸ್ವಾಮಿ-ಸತ್ಯಂಪೇಟೆಯ ಚನ್ನಮಲ್ಲಪ್ಪ, ರಾಮಪುರ ಬೊಕ್ಕಪ್ಪ, ಗುಡೂರು ಗುರುಲಿಂಗಪ್ಪ, ಆಂದೇಲಿ ಕರಣಪ್ಪ, ದಿಗ್ಗಿಸಂಗಮನಾಥ, ಶಹಾಪುರದ ಚರಬಸವ ತಾತ, ವಿಶ್ವಾರಾಧ್ಯ, ಆಲೂರು ಕೆಂಚಬಸವಸ್ವಾಮಿಗಳು, ಅಂಚಲಿಯ ನಾಗಮ್ಮ, ಸೊಪ್ಪೆಯ ಸಿದ್ಧಬಸವ, ಕಲ್ಬುರ್ಗಿ ಶರಣಬಸವ, ಕಡಕೋಳ ಮಡಿವಾಳಪ್ಪನವರ ವರೆಗೆ ಈ ಪರಂಪರೆ ಹರಿದು ಬಂದಿದೆ. ಇವರಲ್ಲಿ ಹಲವರು ಶರಣತತ್ತ್ವವನ್ನು ಜೀವಿಸುತ್ತ ವಚನಗಳನ್ನು ಬರೆದವರಿದ್ದಾರೆ. ಅನುಭಾವಿ ವಾಗ್ಗೇಯಕಾರರಿದ್ದಾರೆ. ಇಂಥ ಅನುಭಾವಿ ವಾಗ್ಗೇಯ ಕಾರರ ಪಂಕ್ತಿಯಲ್ಲಿ ಕಡಕೋಳ ಮಡಿವಾಳಪ್ಪನವರದು ರಾರಾಜಿಸುವ ಹೆಸರಾಗಿದೆ. ಸಗರನಾಡಿನ ಶರಣಪರಂಪರೆಯ ಇತಿಹಾಸಕ್ಕೆ ಈತನೊಂದು ಶಿರಪೇಜಿನಂತೆ ಶೋಭಾಯ ಮಾನವಾಗಿದ್ದಾನೆ.

## ಅನುಭಾವಿ ವಾಗ್ಗೇಯಕಾರರು

ಅನುಭಾವ ಸಾಹಿತ್ಯಕ್ಕೆ ಇವರಿಂದ ಬಹುದೊಡ್ಡ ಕಾಣಿಕೆ ಸಂದಿದೆ. 'ಅನುಭಾವವೆಂಬುದು ನೆಲದ ಮರೆಯ ನಿಧಾನ

ಕಾಣಿಭೋ' ಎಂದಿದೆ ಶರಣವಾಣಿ. 'ಬೊಮ್ಮವನು ಅರಿದಿಹರೆ ಸುಮ್ಮನಿರಬೇಕು' ಎನ್ನುತ್ತಾನೆ ಸರ್ವಜ್ಞ. 'ಅನುಭಾವ ವೆಂಬುದು ಶಿಶುಕಂಡ ಕನಸು' 'ಅನುಭಾವವೆಂಬುದು ಅಂತ ರಂಗದ ರತ್ನ' 'ಅನುಭಾವವೆಂಬುದು ಮೂಕ ಮೆದ್ದ ಬೆಲ್ಲ' 'ಅನುಭಾವವೆಂಬುದು ನಿಜನಿವಾಸದಲ್ಲಿರುವುದು' 'ಅನುಭಾವ ವೆಂಬುದು ತಾನಾರೆಂದರಿಯುವುದು' ಎಂದು ಮುಂತಾಗಿಯೂ ಶರಣರು ವ್ಯಾಖ್ಯೆ ನೀಡುತ್ತಾರೆ. ವಚನಗಳ ಮೂಲಕ ಹೇಗೋ ಹಾಗೆಯೇ ಹಾಡುಗಬ್ಬಗಳ ಮೂಲಕವೂ ಶರಣರು ಅನುಭಾವ ಸಾಹಿತ್ಯಕ್ಕೆ ಸಮೃದ್ಧಿ ತಂದಿದ್ದಾರೆ.[೨]

ಈ ಅನುಭವದ ಬೆಳಕನ್ನು ಹನ್ನೆರಡನೆಯ ಶತಮಾನದ ಶರಣರು ಹಾಡುಗಬ್ಬಗಳ ಮೂಲಕ ಹಂಚಿದಂತೆ, ಮುಂದೆ ಬಂದ ಹರಿಹರ-ರಾಘವಾಂಕ, ನೂರೊಂದು ವಿರಕ್ತರು, ಮುಪ್ಪಿನ ಷಡಕ್ಷರಿ, ಸರ್ಪ ಭೂಷಣರು, ನಿಜಗುಣ ಶಿವಯೋಗಿ ಗಳೂ ಅದೇ ವಾಹಕದಿಂದ ಅನುಭಾವವನ್ನು ಕನ್ನಡದ ತುಂಬ ಪಸರಿಸಿದ್ದಾರೆ. ಬಾಲಲೀಲ ಮಹಾಂತ ಶಿವಯೋಗಿ, ಮೈಲಾರ, ಬಸವಲಿಂಗ ಶರಣ, ಘನಮಠದಾರ್ಯ ಕೂಡ್ಲೂರು ಬಸವಲಿಂಗಪ್ಪ, ಗೂಗಲ್ಲು ಪರಪ್ಪ, ಹೇರೂರು ವಿರುಪಣ್ಣ, ಗೊಬ್ಬೂರು ಹಂಪಣ್ಣ ಮುಂತಾಗಿ ಈ ಪರಂಪರೆ ಮುಂದು ವರಿದುಕೊಂಡು ಬಂದಿದೆ.

---

೨ ಡಾ. ಎಲ್. ಬಸವರಾಜು ಅವರು ತಮ್ಮ 'ಶಿವದಾಸಗೀತಾಂಜಲಿ' ಯಲ್ಲಿ ಇದನ್ನು ಆಧಾರಪೂರ್ವಕ ಸಿದ್ಧಪಡಿಸಿದ್ದಾರೆ.

ಸಗರನಾಡು ವಚನ ಸಾಹಿತ್ಯ ಸೃಷ್ಟಿಗೆ ನಾಂದಿ ಹಾಡಿದಂತೆ, ಅನುಭಾವಿ ವಾಗ್ಗೇಯಕಾರರನ್ನು ಹುಟ್ಟು ಹಾಕುವುದರಲ್ಲಿಯೂ ತನ್ನ ಕಾಣಿಕೆ ಸಲ್ಲಿಸಿದೆ. ಇವರಲ್ಲಿ ಕಡಕೋಳ ಮಡಿವಾಳಪ್ಪ ಅಗ್ರಗಣ್ಯನಾಗಿದ್ದಾನೆ. ಮಡಿವಾಳಪ್ಪನ ವೈಶಿಷ್ಟ್ಯವೇನೆಂದರೆ ಜಾನಪದ ಭಾಷೆಯನ್ನು ಅನುಭಾವಕ್ಕೆ ಹದ ಮಾಡಿದ್ದು. ಜಾನಪದ ಬದುಕನ್ನು ಭಾಷೆಯನ್ನು ಅನುಭಾವದೆತ್ತರಕ್ಕೆ ಏರಿಸಿ ಹಾಡಿದ ಸಗರನಾಡಿನ ಪ್ರಥಮ ಹರಿಕಾರನೀತ.[೧] ರಾಮಪುರದ ಬೊಕ್ಕಪ್ಪನೊಬ್ಬ ಮಾತ್ರ ಜಾನಪದವನ್ನು ತನ್ನ ಹಾಡುಗಳಲ್ಲಿ ಇಡುಗಿಸಿದ್ದು ಕಾಣಿಸುತ್ತದೆ.

ಕಲಬುರ್ಗಿಯ ಶರಣಬಸವೇಶ್ವರ ಮತ್ತು ಮಡಿವಾಳಪ್ಪ ಇವರಿಬ್ಬರೂ ಸಮಕಾಲೀನರು ಮಾತ್ರವಲ್ಲ, ಪರಸ್ಪರ ಹುರಿಗೊಂಡು ಹೊಸೆದು ಬೆಳೆದು ನಾಡಿಗೆ ದಿವ್ಯದ ಬೆಳಕು ನೀಡಿದವರು. ಒಂದು ನಾಣ್ಯದ ಎರಡು ಮುಖಗಳಂತೆ, ಒಂದು ದೃಷ್ಟಿಯ ಎರಡು ಕಣ್ಣುಗಳಂತೆ, ಒಂದು ಹಕ್ಕಿಯ ಎರಡು ರೆಕ್ಕೆಗಳಂತೆ ಅಷ್ಟೇಕೆ? ಎರಡು ಜೀವ ಒಂದು ಆತ್ಮವಾಗಿದ್ದು ಬೆಳಗಿದವರವರು. ಇನ್ನೂ ಸ್ಪಷ್ಟವಾಗಿ ಹೇಳಬೇಕೆಂದಿದ್ದರೆ– 'ಶರಣಬಸವೇಶ್ವರರು ತಮ್ಮ ಕೊನೆಯ

---

೧ ಇದೇ ಅನುಭಾವಿ ವಾಗ್ಗೇಯಕಾರರ ಪರಂಪರೆಯಲ್ಲಿ ಬರುವ ರಸ್ತಾಪುರದ ಭೀಮಕವಿ, ಹೆಮ್ಮಡಿಗೆಯ ಪ್ರಭುಸ್ವಾಮಿ, ಸತ್ಯಂಪೇಟೆಯ ಚನ್ನಮಲ್ಲಪ್ಪ, ಹಾಗೂ ಹುಗ್ಗಿ ಗುರಪ್ಪ, ಮುಂತಾದವರು ಹಾಡುಗಬ್ಬದ ಅನುಭಾವ ಹದಬಲ್ಲವರಾದರೂ ಜನಪದ ಭಾಷೆ ಬದುಕನ್ನು ಬಳಸದಿರುವುದು ಸೋಜಿಗ.

ಲಿಂಗಾರ್ಚನೆಗೆಂದು ಹಚ್ಚಿದ ನಂದಾದೀವಿಗೆ ಇಂದಿಗೂ ಕಲ್ಬುರ್ಗಿಯ ಮಹಾಮನೆಯಲ್ಲಿ ಜಾಜ್ವಲ್ಯಮಾನವಾಗಿ ಬೆಳಗುತ್ತಿದೆ. ಆ ನಂದಾದೀವಿಗೆಯ ಜೋಡುಬತ್ತಿಗಳಲ್ಲಿ ಒಂದು ಬತ್ತಿ ಮಡಿವಾಳಪ್ಪನದಾಗಿದ್ದರೆ–ಇನ್ನೊಂದು ಶರಣಬಸವೇಶ್ವರರದಾಗಿದೆ! "ಎಂದು ಉಪಮಿಸಬಹುದು. ಶರಣಬಸವೇಶ್ವರರ ಬದುಕಿನಲ್ಲಿ ಮಡಿವಾಳಪ್ಪನವರಿದ್ದಾರೆ. ಮಡಿವಾಳಪ್ಪನವರ ಬದುಕಿನಲ್ಲಿ ಶರಣಬಸವೇಶ್ವರರಿದ್ದಾರೆ. ಒಟ್ಟಿನಲ್ಲಿ ಒಬ್ಬರಿಗೊಬ್ಬರು ತಮ್ಮ ತಮ್ಮ ಬದುಕಿಗೆ ನೆರವು ನೀಡಿಕೊಂಡು ಬೆಳೆದಿದ್ದಾರೆ.

ಇವರಲ್ಲಿ ಒಬ್ಬರದು ಮೌನ ಜಾಸ್ತಿ. ಇನ್ನೊಬ್ಬರದು ಮಾತು ಜಾಸ್ತಿ. ಶರಣಬಸವಪ್ಪನವರು ತಾವು ಮಾತಾಡದಿದ್ದರೂ-ಅವರ ಮೌನ ಹೆಚ್ಚು ಮಾತಾಡುತ್ತಿತ್ತು. ಮಡಿವಾಳಪ್ಪನವರು ಮಾತಾಡುತ್ತಿದ್ದರೂ ಅವರ ಮಾತು ಹೆಚ್ಚು ಮೌನ ಬಿತ್ತುತ್ತಿತ್ತು. ಅಂದರೆ ಅನುಭಾವ ಚೆಲ್ಲುತ್ತಿತ್ತು. ಅವರ ಮಾತಿನಲ್ಲಿ ಇವರ ಮೌನ-ಇವರ ಮೌನದಲ್ಲಿ ಅವರ ಮಾತು ಕುಡಿವೊಡೆದು ಇಲ್ಲಿಯ ಬದುಕಿಗೆ ದಿವ್ಯತೆಯ ಸೋಂಕು ನೀಡಿದುವು.

# ೨. ಚರಿತ್ರೆ

[ಕ್ರಿ. ಶ. ೧೮೪೦ ರಿಂದ ೧೯೦೦ ವರೆಗೆ]

## ಹುಟ್ಟು-ಬಾಲ್ಯ

ಶರಣಬಸವೇಶ್ವರರು ಮಡಿವಾಳಪ್ಪನವರ ಬದುಕಿನ ತಿರುವಿಗೆ ಕಾರಣರಾದಂತೆ ಮಡಿವಾಳಪ್ಪನವರ ತಿರುವಿನ ಘಟನೆ ಶರಣಬಸವೇಶ್ವರರ ಜೀವನಕ್ರಮಕ್ಕೂ ಮಹತ್ತರವಾದ ಮಾರ್ಪಾಟನ್ನು ತಂದಿತು.

ಶರಣಬಸವೇಶ್ವರ ಮಡಿವಾಳಪ್ಪನವರೇನು ಬಾಲ್ಯಮಿತ್ರರಲ್ಲ. ಶರಣಬಸವನದು ಅರಳಗುಂಡಿಗೆ, ಮಡಿವಾಳಪ್ಪನದು ಬಿದನೂರು. ಅರಳಗುಂಡಿಗೆ ಜೇವರಗಿ ತಾಲೂಕಿಗೆ ಸೇರಿದ ಗ್ರಾಮ. ಅದರಂತೆ ಬಿದನೂರು ಅಫಜಲ್ಪುರ ತಾಲೂಕಿಗೆ ಒಳಪಟ್ಟಗ್ರಾಮ. ಇದೇ ತಾಲೂಕಿನಲ್ಲಿ ಬಿದನೂರಿಗೆ ಸಮೀಪದಲ್ಲಿ 'ಚಿಣಮಗೇರಿ' ಎಂಬ ಒಂದು ಧಾರ್ಮಿಕ ಜಾಗ್ರತ ಕ್ಷೇತ್ರವಿದೆ. ಅಲ್ಲಿ ಮಹಾಂತ ಶಿವಯೋಗಿಗಳೆಂಬ ತಪಸ್ವಿಗಳು ಅಲ್ಲಿಯೇ ಸಮೀಪದ ಬೆಟ್ಟದಲ್ಲಿ ವಾಸವಾಗಿರುತ್ತಿದ್ದರು. ಅವರು ಸುತ್ತಮುತ್ತಲೆಲ್ಲ ತಮ್ಮ ಪೂಜ್ಯತೆವಡೆದ ಹಿರಿಮೆಯೊಂದಿಗೆ ಸರ್ವಜನರ ಗೌರವಾದರಗಳಿಗೆ ಭಾಜನವಾಗಿದ್ದರು.

ಬಿದನೂರಿಗೆ ಜಿಣಮಗೇರಿ ತೀರ ಹತ್ತಿರದ ಗ್ರಾಮವಾದ್ದರಿಂದ ಮಡಿವಾಳನೂ ಚಿಕ್ಕಂದಿನಲ್ಲಿ ಆಗಾಗ ಅಲ್ಲಿಗೆ ಹೋಗಿ ಬರುತ್ತಿದ್ದನು. ಮಡಿವಾಳನಿಗೆ ಚಿಕ್ಕಂದಿನಲ್ಲಿ ಆಧ್ಯಾತ್ಮಿಕ ಹಸಿವು ಉಂಟಾಗುವದಕ್ಕೆ ಇದೂ ಒಂದು ಕಾರಣವಿರಬಹುದು. ಮಡಿವಾಳನು ಇದೇ ಮಹಾಂತ ಶಿವಯೋಗೀಶ್ವರರ ವರದಿಂದ ಜನಿಸಿದನೆಂಬ ವಾಡಿಕೆಯೂ ಇಲ್ಲಿ ಪ್ರಚಾರದಲ್ಲಿದೆ.

ಅರಳಗುಂಡಿಗೆ ಬಿದನೂರೂ ಗ್ರಾಮಗಳಿಗೆ ಸುಮಾರು ೩೦ ಮೈಲುಗಳ ಅಂತರವಿದೆ. "ಎತ್ತಣ ಮಾಮರ ಎತ್ತಣ ಕೋಗಿಲೆ ಎತ್ತಣಿಂದೆತ್ತ ಸಂಬಂಧವಯ್ಯ......" ಎಂಬಂತೆ ಎತ್ತಣಿಂದೆತ್ತಲೋ ಸಂಬಂಧ ಬೆಳೆದುಬಂತು. ಮಡಿವಾಳಪ್ಪನಿಗಾಗಲೇ ಆಧ್ಯಾತ್ಮಿಕ ಹಂಬಲ ವಿಪರೀತವಾಗಿತ್ತು. ಶರಣ ಬಸವಪ್ಪನಿಗೂ ಅಂಥ ಜೊತೆಗಾರರು ಬೇಕಾಗಿದ್ದರು. ಅವರೀರ್ವರ ಹೃದಯ ಹಾರೈಕೆ ಒಗ್ಗೂಡಿ ಬಂತು. ಜೊತೆಗೂಡಿಕೊಂಡರು. ಒಬ್ಬರಿಗೊಬ್ಬರು ಹುರಿಗೊಂಡು ಹೊಸೆದು ಬೆಳೆದರು. ಕಣ್ಣೆರಡಾಗಿದ್ದರೂ ದೃಷ್ಟಿ ಒಂದಾಗಿರುವಂತೆ ದೇಹವೆರಡಾಗಿದ್ದರೂ ಏಕಾತ್ಮರಾಗಿ ತೊಳಗಿದರು.

ಹಾಗೆ ನೋಡಿದರೆ ಮಡಿವಾಳಪ್ಪನ ಪೂರ್ವಜರು ಸಗರನಾಡಿನವರೇ ಅಲ್ಲ. ವಿಜಾಪುರದ ಜಿಲ್ಲೆಯ ಇಂಡಿ ತಾಲೂಕಿಗೆ ಸೇರಿದ ನಾಗಠಾಣ ಎಂಬ ಗ್ರಾಮದಿಂದ ಗಂಗಮ್ಮನೆಂಬೋರ್ವ ವಿಧವೆ ತನ್ನ ವೃದ್ಧ ತಂದೆಯೊಂದಿಗೆ ಇತ್ತ ವಲಸೆ ಬಂದಳು. ವಿಜಾಪುರ ಜಿಲ್ಲೆಯ ಇಂಡಿ ತಾಲೂಕು ಆಗಿನ ಸಮಯದಲ್ಲಿ

ಭೀಕರ ಬರಗಾಲಕ್ಕೆ ತುತ್ತಾಗಿತ್ತು. ಬರಗಾಲದ ಭವಣೆಯನ್ನು ತಾಳದೆ ಜನ ವಲಸೆ ಹೊರಟಿದ್ದರು. ಅಂಥ ವಲಸೆ ಬಂದ ಕುಟುಂಬಗಳಲ್ಲಿ ಇದೂ ಒಂದು.

ತಮ್ಮ ಊರಿಂದ ವಲಸೆ ಹೊರಟ ಗಂಗಮ್ಮ ತನ್ನ ತಂದೆಯೊಂದಿಗೆ ಬಿದನೂರಿಗೆ ಬಂದು ನಿಂತುಕೊಂಡಳು. ಬಿದನೂರಿನಲ್ಲಿ ಮಲ್ಲಿಕಾರ್ಜುನಪ್ಪ ಗೌಡರೆಂಬ ಆಧ್ಯಾತ್ಮ ಜಿಜ್ಞಾಸುಗಳಿದ್ದರು. ಅವರ ಹೊಲದಲ್ಲಿ ಬಸವೇಶ್ವರ ದೇವಾಲಯವಿತ್ತು. ಅದೇ ದೇವಾಲಯದಲ್ಲೇ ಇವರೀರ್ವರು ಬಿಡಾರ ಮಾಡಿಕೊಂಡಿದ್ದರು. ಗಂಗಮ್ಮನ ತಂದೆಯೂ ಪ್ರವೃತ್ತಿಯಿಂದ ಆಧ್ಯಾತ್ಮಕನಾಗಿದ್ದುದರಿಂದ ಮಲ್ಲಿಕಾರ್ಜುನಪ್ಪಗೌಡರಿಗೂ ಅವರಿಗೂ ತುಂಬಾ ಸಖ್ಯ ಬೆಳೆದು ಬಂತು. ಬರುಬರುತ್ತ ಅವರು ಅತ್ಯಂತ ಅನ್ಯೋನ್ಯತೆಯಿಂದ ಇರತೊಡಗಿದರು.

ಆದರೆ ವಿಧಿಯ ಕೈವಾಡ ಮತ್ತೊಂದು ತೆರನಾಗಿತ್ತು. ವಲಸೆಬಂದು ವರ್ಷವೂ ಪೂರ್ತಿಗೊಂಡಿರಲಿಲ್ಲ. ಗಂಗಮ್ಮನ ತಂದೆ ವೃದ್ಧಾಪ್ಯದಿಂದ ಅಸುನೀಗಿದರು. ಗಂಗಮ್ಮ ಅನಾಥಳಾದಳು. ಹಿಂದುರಿಗಿ ತಮ್ಮ ಊರಿಗೆ ಹೋಗಬೇಕೆಂದರೆ ಅಲ್ಲಿಗೆ ಮರಳಲು ಆಕೆಯ ಮನಸ್ಸು ಒಪ್ಪಲಿಲ್ಲ. ಹಿಂದು ಮುಂದು ಯಾರೂ ಇಲ್ಲದೆ ವಿಧವೆಯಾದ ಆಕೆ ಅಲ್ಲಿ ಸುರಕ್ಷಿತವಾಗಿ ಬದುಕುವದು ಸಾಧ್ಯವಿರಲಿಲ್ಲ. ಗಂಡಸತ್ತ ಆಘಾತದ ಬೆನ್ನ ಹಿಂದೆಯೇ ಬಂದ ಬರಗಾಲದ ಭವಣೆ ಅವಳ ಮನಸ್ಸನ್ನು ಅಧೀರಗೊಳಿಸಿತ್ತು. ಅಲ್ಲಿಂದ ಹೊರಟು ಬಂದು

ಸುರಕ್ಷಿತ ತಾಣವಾದ ಬಿದನೂರಿಗೆ ಬಂದು ನೆಮ್ಮದಿಯಿಂದ ಉಸಿರಾಡಿಸುತ್ತಿದ್ದೇನೆನ್ನುತ್ತಲೇ ಆಕೆಯ ತಂದೆಯೂ ತೀರಿಕೊಂಡ. ಇದರಿಂದ ಆಕೆ ತುಂಬಾ ಜರ್ಝರಿತಗೊಂಡಳು.

ಮಲ್ಲಿಕಾರ್ಜುನಪ್ಪ ಗೌಡರು ಅವಳಿಗೆ ಸಾಂತ್ವನ ಹೇಳಿದರು. ತಮ್ಮ ಮನೆಗೆ ಕರೆದೊಯ್ದರು. ಆದರೇನು? ಆಡಿಕೊಳ್ಳುವ ಹೊಲಸು ಬಾಯಿಗೆ ಆಕೆ ಆಹಾರವಾದಳು. ಗಂಗಮ್ಮನ ಮನಸ್ಸು ತುಂಬ ರೋಸಿಹೋಯಿತು. ಬದುಕಿನಲ್ಲಿ ನಿರಾಶೆ ಹುಟ್ಟಿತು. ಆತ್ಮಹತ್ಯಕ್ಕೆ ಮನಸ್ಸು ಮಾಡಿದಳು.

ಒಂದು ದಿನ ನಸುಕಿನಲ್ಲಿ ಬಾವಿಯಲ್ಲಿ ಬೀಳಬೇಕೆಂದು ಹೊರಟಳು. ನಡುವಿಗೆ ಸೆರಗು ಸುತ್ತಿ ಇನ್ನೇನು ಬಾವಿಯಲ್ಲಿ ಧುಮುಕಲಿದ್ದಳು. ಅಷ್ಟರಲ್ಲೇ ಆ ಊರಿನ ಹಿರೇಮಠದ ಚರಪಟ್ಟಾಧಿಕಾರಿಗಳಾದ ಶ್ರೀ ವಿರುಪಾಕ್ಷಸ್ವಾಮಿಗಳು ಬಯಲಕಡೆಗೆಂದು ಬಂದವರು ಆ ದೃಶ್ಯವನ್ನು ಕಂಡರು. ಒಡನೆ ಓಡಿಹೋಗಿ ಆಕೆಯನ್ನು ತಡೆದರು. ಸಾಂತ್ವನ ಹೇಳಿದರು. ಆತ್ಮಹತ್ಯಕ್ಕೆ ಕಾರಣವೇನೆಂದು ಕೇಳಿದರು. ಅವಳಿಗೆ ಹಿಂದು ಮುಂದೆ ಯಾರೂ ಇಲ್ಲದ ಅನಾಥ ಹೆಣ್ಣುಮಗಳೆಂಬುದು ತಿಳಿಯಿತು. ಕರುಣೆಯಿಂದ ಆಕೆಯನ್ನು ಮಠಕ್ಕೆ ಕರೆದೊಯ್ದರು. ಗಂಗಮ್ಮ ಸ್ವಾಮಿಗಳ ಸೇವೆ ಮಾಡಿಕೊಂಡು ಅಲ್ಲೇ ಉಳಿದಳು.

ವರ್ಷವೊಪ್ಪತ್ತು ಕಳೆಯುವವರೊಳಗಾಗಿ ಅಚಾತುರ್ಯವೊಂದು ಘಟಿಸಿತು. ವಿರುಪಾಕ್ಷಯ್ಯ ಗಂಗಮ್ಮ ಇವರಿಬ್ಬರಲ್ಲಿ

ಅನೈತಿಕ ಸಂಬಂಧ ಬೆಳೆಯಿತು. ಮುಂದೆ ಗಂಗಮ್ಮ ಬಸುರಿಯಾದಳು. ಈ ಸುದ್ದಿ ಊರಲ್ಲೆಲ್ಲ ಕಾಳ್ಗಿಚ್ಚಿನಂತೆ ಹಬ್ಬಿತು. ಈ ಅನೈತಿಕ ಸಂಬಂಧಕ್ಕೆ ತೆರೆಯೆಳೆಯಲೋಸುಗ ಈ ಬಗ್ಗೆ ಇಲ್ಲೊಂದು ಕತೆ ಪ್ರಚಾರದಲ್ಲಿದೆ.

ಚಿಣಮಗೇರಿ ಬೆಟ್ಟದ ಮಹಾಂತ ಶಿವಯೋಗಿಗಳು ಒಮ್ಮೆ ತಮ್ಮ ಶಿಷ್ಯ ಪರಂಪರೆಯ ಮಠವಾಗಿದ್ದ ಬಿದನೂರಿನ ಮಠಕ್ಕೆ ಆಗಮಿಸಿದ್ದರು. ಬೇಸಿಗೆಯ ಕಾಲ. ಮಧ್ಯಾಹ್ನ ಬೇರೆ. ಆಗ ಆ ಮಠದೊಡೆಯರಾದ ಶ್ರೀ ವಿರುಪಾಕ್ಷಸ್ವಾಮಿಗಳು ಉಪಸ್ಥಿತರಿರಲಿಲ್ಲ. ಬೇರೆಲ್ಲೋ ಪ್ರವಾಸ ಕೈಕೊಂಡಿದ್ದರು. ಗಂಗಮ್ಮನೇ ಅವರನ್ನು ಆದರದಿಂದ ಬರಮಾಡಿಕೊಂಡು ಸತ್ಕರಿಸಿದಳು. ಅವರ ಲಿಂಗಾರ್ಚನೆಗೆ ಅಣಿಮಾಡಿಕೊಟ್ಟು ಉತ್ತಮ ಭೋಜ್ಯಗಳನ್ನು ಸಿದ್ಧಪಡಿಸಿ ಪ್ರಸಾದವಿಕ್ಕಿದಳು. ಸ್ವಾಮಿಗಳು ಗಂಗಮ್ಮನ ಆದರ ಸತ್ಕಾರಗಳಿಂದ ತುಂಬ ಸಂಪ್ರೀತಗೊಂಡರು.

ಬೆಟ್ಟದ ಶಿವಯೋಗಿಗಳು ಅಲ್ಲಿಂದ ಹೊರಡುವ ಮುನ್ನ ಗಂಗಮ್ಮನನ್ನು ಕರೆದು ಬಾಳೆಹಣ್ಣುಗಳನ್ನು ಆಶೀರ್ವದಿಸುತ್ತ "ಈ ಹಣ್ಣುಗಳನ್ನು ನೀನೂ ಹಾಗೂ ವಿರುಪಾಕ್ಷಯ್ಯನವರೂ ಹಂಚಿಕೊಂಡು ತಿನ್ನಿರಿ" ಎಂಬ ಆಜ್ಞೆ ನೀಡಿ ಹೊರಟು ಹೋದರು.

ಸರಿಯೆ ಪೂಜ್ಯರ ಆಣತಿಯನ್ನು ಮೀರಲಿಕ್ಕಾಗುವದಿಲ್ಲ. ವಿರುಪಾಕ್ಷಯ್ಯ ಮತ್ತು ಗಂಗಮ್ಮ ಈರ್ವರೂ ಅವರು ಹೇಳಿದಂತೆ ನಡೆದುಕೊಂಡರು. ಇದಾಗಿ ಪೂರ್ತಿ ತಿಂಗಳು ಆಗಿರ

ಲಿಲ್ಲ. ಅವರಿಬ್ಬರಲ್ಲಿ ಪರಸ್ಪರ ಕಾಮನೆ ಮೈದೋರಿತು. ಒಬ್ಬರನ್ನೊಬ್ಬರು ಬಯಸಿದರು, ಕೂಡಿದರು. ಈ ಕೂಡುವಿಕೆಯ ಫಲವಾಗಿ ಆಕೆ ಗರ್ಭಧರಿಸಿದಳು. ಗಂಗವ್ವ ಭೀತಳಾದಳು. ವಿರುಪಾಕ್ಷಯ್ಯನವರು ಮುಖ ಕೆಳಗಿಟ್ಟರು. ಆಗ ಮತ್ತೆ ಗುಡ್ಡದ ಮಹಾಂತ ಶಿವಯೋಗಿಗಳೇ ಸಾಂತ್ವನ ಹೇಳಿದರು. ನಿಮ್ಮ ಹೊಟ್ಟೆಯಲ್ಲಿ ಹುಟ್ಟುವ ಕೂಸು ಲೋಕವಿಖ್ಯಾತನಾಗಲಿದ್ದಾನೆಂದು ತಿಳಿಸಿದರು. ಅದರಂತೆ ಗಂಗವ್ವ ಗಂಡು ಕೂಸೊಂದಕ್ಕೆ ಜನ್ಮವಿತ್ತಳು. ಮಹಾಂತ ಶಿವಯೋಗಿಗಳ ಸಲಹೆಯ ಮೇರೆಗೆ ಆ ಕೂಸಿಗೆ ಮಡಿವಾಳನೆಂದು ಹೆಸರಿಟ್ಟರು. ವಿರುಪಾಕ್ಷಯ್ಯನವರು ಜಂಗಮರಾಗಿದ್ದರೂ ಗಂಗವ್ವ ಗಾಣಿಗ ಕುಲಕ್ಕೆ ಸೇರಿದ ಹೆಣ್ಣುಮಗಳಾದ್ದರಿಂದ ಹುಟ್ಟಿದ ಮಗುವಿಗೆ ಲಿಂಗಧಾರಣೆಯಾಗಲಿಲ್ಲ. ಅಲ್ಲದೆ ಈ ಬಗ್ಗೆ ಆಗ ಯಾರೂ ಹೆಚ್ಚಾಗಿ ಯೋಚಿಸಲೂ ಇಲ್ಲ.

ಓರಗೆಯ ಗೆಳೆಯರಲ್ಲಿ ಮಡಿವಾಳ ನಾಯಕನಾಗಿರುತ್ತಿದ್ದ. ಆಟ, ಓಟ, ಪಾಠಗಳಲ್ಲಿ ಒಂದು ಹೆಜ್ಜೆ ಮುಂದಿದ್ದರೇನೇ ಅವನಿಗೆ ಸಮಾಧಾನ. ಎಳವೆಯಲ್ಲಿ ಮಡಿವಾಳ ಬಲು ತುಂಟ ಬಾಲಕನಾಗಿದ್ದ. ಒಂದು ಸಾರೆ ಚೆಂಡು ಆಡುತ್ತಿದ್ದಾಗ ಅವನ ಚೆಂಡು ನೀರು ತರುತ್ತಿದ್ದ ಹೆಣ್ಣುಮಗಳ ಕೊಡಕ್ಕೆ ತಗಲಿತು. ಆ ಹೆಣ್ಣು ಮಗಳು ಅಶ್ಲೀಲವಾಗಿ ನಿಂದಿಸುತ್ತ ಅವನನ್ನು 'ಹಾಟ್ಯಾ' ಎಂದು ಬೈದಳು.

ಮನೆಯೊಳಗಿದ್ದ ಗಂಗವ್ವ ಅವಳ ಈ ಬೈಗಳನ್ನು ಕೇಳಿದಳು. ಅರಿವಿಲ್ಲದೆ ಹೇಗೆ ಬಯ್ಯುತ್ತಿದ್ದಾಳಲ್ಲ ಅನ್ನಿಸಿತು.

ಒಡನೆ ಅವಳು ಒಳಗಿನಿಂದ ಹೊರಕ್ಕೆ ಬಂದಳು. ಆಕೆಯುನ್ನು ಕುರಿತು ಹೀಗೆ ಹೇಳಿದಳು.

"ಹಾಟ್ಯಾ ಹಾಟೆನುಬ್ಯಾಡ ಹಾಟು ಸಣ್ಣದಲ್ಲ|
ಅದು ಬಲು ದೊಡ್ಡದು ತಂಗಿ| ದೊಡ್ಡದು
ತಂಗಿ ||ಪ||
ದೇವ ದಾನವರೆಲ್ಲ| ಮನು ಮುನಿಗಳೆಲ್ಲ|
ಅದರೊಳಗ ಹುಟ್ಯಾರ ತಂಗಿ! ಹುಟ್ಯಾರ ತಂಗಿ||
ನಾನು ನೀನೆಲ್ಲ ಅದರೊಳಗ ಹುಟ್ಟೇವಿ|
ಅದು ಬಲು ದೊಡ್ಡದು ತಂಗಿ| ದೊಡ್ಡದು ತಂಗಿ||

ಈ ಕಥೆಯುನ್ನು ಹೇಳಿದವರು ಗೊಬ್ಬೂರಿನ ಶ್ರೀ ಬೋಜ ರಾಯುಗೌಡರು.

ಇಲ್ಲಿ ಬಳಕೆಗೊಂಡ ಪದಗಳು ಅಶ್ಲೀಲವಾಗಿರುವವಾದರೂ ಅವುಗಳ ಒಡಲಲ್ಲಿ ಹುದುಗಿರುವ ತತ್ತ್ವ ಅಶ್ಲೀಲವಲ್ಲ. ಗಂಗಮ್ಮ ಕಂಡುಕೊಂಡ ಸತ್ಯ ಅಶ್ಲೀಲವಲ್ಲ. ಅವಳೂ ಓರ್ವ ಅನುಭಾವಿಕ ಕವಯಿತ್ರಿಯಾಗಿದ್ದಳೆಂಬ ಸಂಗತಿ ಇದರಿಂದ ವೇದ್ಯವಾಗುತ್ತದೆ.

ಮಡಿವಾಳಪ್ಪ ಹುಟ್ಟಾ ಪ್ರತಿಭಾವಂತನಾಗಿದ್ದ. ತಾಯಿ ಗಂಗಮ್ಮ ತತ್ತ್ವಜ್ಞಾನಿಯಾಗಿದ್ದಳು. ಅವಳ ಯೋಗ್ಯ ಮಾರ್ಗದರ್ಶನ ಅವನಿಗೆ ದೊರಕಿತು. ಮಲ್ಲಿಕಾರ್ಜುನಪ್ಪ ಗೌಡರು ಮಡಿವಾಳಪ್ಪನ ಪೋಷಣೆಯು ಹೊಣೆ ಹೊತ್ತಿದ್ದರು. ದಿನಗಳೆದು ದೊಡ್ಡವನಾದಂತೆ ಮಡಿವಾಳಪ್ಪ ಓದು ಬರಹ ಕಲಿತ. ಗುಡ್ಡದ ಮಹಾಂತ ಶಿವಯೋಗೀಶ್ವರರ ಸಂಪರ್ಕಕ್ಕೆ

ಬಂದ. ಅವರು ಈತನನ್ನು ಆಧ್ಯಾತ್ಮಿಕಕ್ಕೆ ಹದಮಾಡಿ ತಮ್ಮ ಅಖಂಡ ಜ್ಞಾನವನ್ನು ಧಾರೆಯೆರೆಯಬೇಕೆಂದಿದ್ದರು. ತಮ್ಮ ಪೀಠಕ್ಕೆ ಮಡಿವಾಳಪ್ಪನನ್ನೇ ತೆಗೆದುಕೊಳ್ಳಬೇಕೆಂಬ ಇಚ್ಛೆ ಇತ್ತು. ಆದರೆ ಆ ಯೋಗ ಒದಗಿಬರುವ ಮುನ್ನವೇ ಅವರು ಲಿಂಗೈಕ್ಯರಾದರು.

ಮಡಿವಾಳಪ್ಪನ ತಂದೆ–ತಾಯಿಗಳಾದ ಗಂಗಮ್ಮ ವಿರುಪಾಕ್ಷಯ್ಯನವರುಗಳು ಮುಂದೆ ಹೇಗೆ ವರ್ತಿಸಿದರು? ಎಂಬ ಬಗ್ಗೆ ಹೆಚ್ಚಿಗೆ ತಿಳಿದುಬರುವದಿಲ್ಲ. ಮಡಿವಾಳಪ್ಪನಲ್ಲಿ ಮೊಳಕೆಯೊಡೆದ ಆಧ್ಯಾತ್ಮಿಕ ಸಸಿಯನ್ನು ನೀರೆರೆದು ಬೆಳೆಸಿದವರು ಮಾತ್ರ ಮಲ್ಲಿಕಾರ್ಜುನಪ್ಪಗೌಡರೆಂಬುದಾಗಿ ಗೊತ್ತಾಗುತ್ತದೆ. ಮಡಿವಾಳಪ್ಪನಿಗೆ ಅವರೊಂದಿಗೆ ಆತ್ಮೀಯ ಸಲುಗೆ ಇದ್ದು ಆಗಾಗ ಅವರೊಂದಿಗೆ ದೇವರು, ಧರ್ಮ ಮುಂತಾದವುಗಳಬಗ್ಗೆ ಚರ್ಚಿಸುತ್ತಿದ್ದ.

ಅನುಷ್ಠಾನ ಜಪ–ತಪಗಳ ಬಗೆಗೆ ಮಡಿವಾಳಪ್ಪನಿಗೆ ಅದೇಕೋ ವಿಶೇಷ ಒಲವು ಉಂಟಾಗುತ್ತಿತ್ತು. ಆ ಬಗ್ಗೆ ಮಲ್ಲಿಕಾರ್ಜುನಪ್ಪಗೌಡರೊಂದಿಗೆ ಹೇಗೋ ಹಾಗೆಯೇ ಚಿಣಮಗೇರಿಯ ಮಹಾಂತ ಬೆಟ್ಟಕ್ಕೆ ಬಂದು ತಂಗಿರುತ್ತಿದ್ದ. ಸಾಧು ಸಂತರೊಂದಿಗೂ ಶಿವಯೋಗಿ ಜಂಗಮ ಮೂರ್ತಿಗಳೊಂದಿಗೂ ವಿಚಾರ ವಿನಿಮಯ ನಡೆಸುತ್ತಿದ್ದ ಹಠಯೋಗ, ಲಯಯೋಗ ರಾಜಯೋಗಗಳ ಅಲ್ಪಸ್ವಲ್ಪ ಮಾಹಿತಿ ಉಂಟಾಗಿತ್ತಾದರೂ ನಿಖರವಾದ ಸಾಧನೆಯನ್ನೇನೂ ಆತ ನಡೆಸಲಿಲ್ಲ. ಮಲ್ಲಿಕಾರ್ಜು

ನಪ್ಪಗೌಡರು ವೀರಶೈವದ ಅಷ್ಟಾವರಣ ಪಂಚಾಚಾರ ಷಟ್‌ಸ್ಥಲಗಳನ್ನು ಕುರಿತು ಸಮಗ್ರವಾದ ಪರಿಚಯ ಮಾಡಿಕೊಟ್ಟಿದ್ದರು. ಅದು ಸಾಧಿತವಾಗಬೇಕಾದರೆ ಲಿಂಗಧಾರಣೆ ಅತ್ಯವಶ್ಯವೆಂದರಿತ ಅವನು ತನ್ನ ಮನದಿಂಗಿತವನ್ನು ಹಲವರೆದುರಿಗೆ ತೋಡಿಕೊಂಡ. ಆದರೆ ಅದು ನಿಷ್ಫಲವಾಯಿತು.

ತನ್ನ ಹುಟ್ಟಿನ ಬಗ್ಗೆ ಕೇಳಿಬಂದ ಮಾತುಗಳು ಆತನನ್ನು ತುಂಬಾ ನೋಯಿಸಿದವು. ಎದೆಯಲ್ಲಿ ಅನೇಕ ತರ್ಕ ಬುದ್ಬುದಗಳನ್ನೆಬ್ಬಿಸಿದವು. ಹುಟ್ಟು ಆಕಸ್ಮಿಕವೆಂಬ ಸಂಗತಿ ಲೋಕಕ್ಕೆ ಯಾಕೆ ಅರಿಯದಾಯಿತೆಂಬುದೇ ಅವನಿಗೆ ತಿಳಿಯಲಿಲ್ಲ. ಆಧ್ಯಾತ್ಮಿಕ ಲೋಕ ಪ್ರವೇಶಕ್ಕೆ ಹುಟ್ಟು ಆತಂಕವಾದುದಂತೂ ಆತನಿಗೆ ತೀವ್ರ ಸಂತಾಪ ಉಂಟು ಮಾಡಿತ್ತು. ಆಧ್ಯಾತ್ಮ ಯಾರೊಬ್ಬರ ಸೊತ್ತಲ್ಲ. ಬಯಸುವವರಿಗೆಲ್ಲ ಅಲ್ಲಿ ಮುಕ್ತ ಸ್ವಾತಂತ್ರ್ಯವಿರಬೇಕು. ಎಂಬುದೇ ಆತನ ದೃಢ ನಿಲುವಾಗಿತ್ತು. ಹಲವರೊಂದಿಗೆ ಈ ಸಂಗತಿಯನ್ನು ಕುರಿತು ಆಗಲೇ ವಿಮರ್ಶೆ ಮಾಡಿಯೂ ಬಿಟ್ಟಿದ್ದ. ಆದರೆ ಆಗ ಕೇಳಿಸಿದ ನುಡಿಗಳೊಂದೂ ಸಮಾಧಾನ ನೀಡಿರಲಿಲ್ಲ, ತತ್ತ್ವಪ್ರೇರಿತವಾದವುಗಳಾಗಿರಲಿಲ್ಲ.

ಈ ಸಮಸ್ಯೆಯನ್ನು ಕಂಡವರೊಡನೆ ಚರ್ಚಿಸುವಂತೆಯೂ ಇರಲಿಲ್ಲ. ಮಲ್ಲಿಕಾರ್ಜುನಪ್ಪಗೌಡರನ್ನು ವಿಚಾರಿಸಿದನೆ ಅವರು ಸಾಮಾಜಿಕ ವಿರೋಧ ಬರುವುದೆಂದು ಹೇಳಿದರು. ಸಾಮಾಜಿಕ ವಿರೋಧವನ್ನು ಲೆಕ್ಕಿಸದೆ ಲಿಂಗದೀಕ್ಷೆ

ನೀಡುವಂಥ ತತ್ತ್ವನಿಷ್ಠ ಆರೋಗ್ಯಕರ ಮನಸ್ಸಿನ ಸ್ವಾಮಿಗಳಾದರೂ ಈಗ ಸುತ್ತಮುತ್ತಲಿನಲ್ಲಿಲ್ಲವೆಂದು ವಿಷಾದಿಸಿದರು. ಮಡಿವಾಳಪ್ಪನಿಗೆ ತುಂಬಾ ನಿರಾಶೆಯಾಯಿತು.

ಹಸಿವು, ತೃಷೆ, ವ್ಯಸನಕ್ಕೆ ಕುದಿಕುದಿದು ಚರಾಚರದೊಳಗೆ ಲಯವಾಗಿ ಹೋಗುವದಷ್ಟೇ ತನ್ನ ಹಣೆಬರಹದಲ್ಲಿ ಬರೆದಿದೆಯೇ?

ಹೊತ್ತಾರೆ ಎದ್ದು ಹೂ ಪತ್ರೆ ಉದಕವ ತಂದು ಅಷ್ಟವಿಧಾರ್ಚನೆ ಷೋಡಶೋಪಚಾರವ ಮಾಡಬೇಕೆಂದಿದ್ದೆ.

ಜಗದ ಕರ್ತನನ್ನು ಕೈಯಲ್ಲಿ ಹಿಡಿದುಕೊಂಡು ನನ್ನನ್ನು ನಾನು ಮರೆತು ಬೆರೆಯಬೇಕೆಂದಿದ್ದೆ.

ಕಟ್ಟಿ ಮನವ, ಮೆಟ್ಟಿ ಮದವ, ಸುಟ್ಟುರುಹಬೇಕೆಂದಿದ್ದೆ, ಲಿಂಗ ಸಾನಿಧ್ಯದಲ್ಲಿ ಸಪ್ತ ವ್ಯಸನಗಳ.

ತೊಟ್ಟಿಲ ಮುರಿದು ಕಣ್ಣಿಯ ಹರಿದು ಬಟ್ಟಬಯಲಲ್ಲಿ ಜೋಗಳ ಹಾಡು ಹಾಡಿ ಆನಂದಿಸಬೇಕೆಂದಿದ್ದೆ.

ಮರದೊಳಗೆ ಹುದುಗಿರುವ ಮಂದಾಗ್ನಿ, ನೊರೆವಾಲೊಳಗೆ ಸೇರಿರುವ ಕಂಪಿಲ್ಲದ ತುಪ್ಪ ಶರೀರದೊಳಗಾಗಿರುವ ಆತ್ಮ ಇವೆಲ್ಲ ಬೆರೆತಿರುವ ಭೇದವ ಅರಸಿ ಅರಿದು ಅವಗತ ಮಾಡಿಕೊಳ್ಳಬೇಕೆಂದಿದ್ದೆ.

ಜಲದೊಳಗಿದ್ದ ಕಿಚ್ಚು ಜಲವ ಸುಡದೆ ಅಡಗಿರ್ಪ ವಿಪರೀತವ ಬಗೆದು ನೋಡಬೇಕೆಂದಿದ್ದೆ. ಹೊನಗೊಳಗೆ ತಾನಾಗಿದ್ದು ತಲೆದೋರದಿರ್ಪ ಪರ ತತ್ತ್ವವನ್ನು ಕರಕಂಜದಲ್ಲಿಟ್ಟು ಪೂಜಿಸಿ ಕರಗಬೇಕೆಂದಿದ್ದೆ.

ಆದರೆ 'ಮಾಡುವದೇನು? ನನ್ನ ಹುಟ್ಟು ನನಗೆ ಆತಂಕವಾಗಿದೆಯಲ್ಲ! ನಾನು ಮಹಾಂತನೆತ್ತರ ಸಾಧಿಸುವದು ಯಾವಾಗ?

ಹ್ಯಾಂಗೆ ಭ್ರಾಂತಿ ನೀಗುತಿ।
ನೀ ಹ್ಯಾಂಗೆ ಮಹಾಂತನಾಗುತಿ॥
ಹಾಂಗೆ ಹೀಂಗೆ ಹೊತ್ತುಗಳೆದು।
ನೀ ಹಿಂಗೆ ಸತ್ಹೋಗುತಿ॥ ಪ॥

ಎಂದು ತನಗೆ ತಾನೇ ಕೇಳಿಕೊಂಡ. ತಳಮಳದಿಂದ ಹೊಯ್ದಾಡಿದ.

ಮಹಾಂತ ಬೆಟ್ಟಕ್ಕೆ ಬಂದು ಶಿವಯೋಗಿಗಳ ಸಮಾಧಿ ಎದುರ ಕುಳಿತು ತಲೆಚಚ್ಚಿಕೊಂಡನು. ಅದಾರೋ ಹೇಳಿದ್ದ, ಹಠಯೋಗ ಲಯಯೋಗ ಅನುಸಂಧಾನವನ್ನು ಕೆಲವು ದಿನ ಮಾಡಿನೋಡಿದನು. ಅದಾವುದರಿಂದಲೂ ಆತನ ಮನಸ್ಸಿಗೆ ಸಮಾಧಾನವುಂಟಾಗಲಿಲ್ಲ. ದಿನದಿಂದ ದಿನಕ್ಕೆ ಆತ್ಮಿಕ ಹಂಬಲ ತೀವ್ರವಾಯಿತು. ಶಿವಯೋಗಿಗಳ ಗದ್ದುಗೆಯ ಮುರು ನತಮ

ಸ್ತಕನಾಗಿ ಮಂಡಿಸಿ ದಿಟ್ಟಿಸಿದನು. ಆತನ ಕಾವ್ಯ ಹೃದಯ ಉಕ್ಕಿಬಂತು. ಭಾವಕ್ಕೆ ತಕ್ಕ ಭಾಷೆ ಮೈದಾಳಿ ಬಂತು. ರಾಗ ಲಯ ಮಾಧುರ್ಯಗಳೂ ಒಗ್ಗೂಡಿ ಬಂದುವು.

ಗುರುವೆ ನೀ ಬೇಗನೆ ಮೊರೆ ಕೇಳೋ|
ವ್ಯರ್ಥ ಹರಿದು ಹೋಗುತೀನಿ ಹಿಡಕೊಳ್ಳೋS|
ಯಪ್ಪಾS ಹರಿದು ಹೋಗುತೀನಿ
ಹಿಡಕೊಳ್ಳೋS... || ಪ ||

ಪದರಿಗಿ ಬಿದ್ದೀನಿ ಪಾಪಿಷ್ಠ
ಗುರು ಮಹಾಂತ ಸರಿಮಾಡೊ ಅದೃಷ್ಠ
ಸೇವಕ ನಾನಿನ್ನ ಗಟ್ಟಿ ಮುಟ್ಟ
ಗುರುರಾಯ ತಪ್ಪಿಸೊ ವಿಧಿಯಾಟ || ೧ ||

ಗುರುವೆ ನೀ ಹಾಕಿದ್ದಿ ಬಲಿಯೊಂದು
ಬೇರೆ ನಾ ಹಾಕಿಕೊಂಡೆ ಮತ್ತೊಂದು
ಬಂಧನ ಬಿಡಿಸೋ ನೀ ಬಂದು
ನಿನ್ನಹೊರ್ತು ಯಾರಿಲ್ಲೋ ಭಾಯಿಬಂಧು || ೨ ||

ಏಸೋ ಜನ್ಮ ತಿಳಿಯದಲ್ಲೋದೆ
ಈ ಜನ್ಮದಲಿ ನಿಮ್ಮ ಮಗನಾದೆ
ಯಾರು ತೋರುವರೋ ನಿನ್ನ ಹಾದಿ
ನೀ ಬಂದು ಮಾಡೋ ನಿಜ ಗುರುಬೋಧಿ || ೩ ||

ಎಂದು ತನ್ನ ಎದೆಗುದಿಯನ್ನು ತೋಡಿಕೊಂಡನು.

ಗುಡ್ಡದ ಮಹಾಂತ ಮೊರೆ ಕೇಳಿದನೇನೋ ಎಂಬಂತೆ ಮಹಾಂತ ಬೆಟ್ಟಕ್ಕೆ ಒಮ್ಮೆ ಶಿವಯ್ಯನವರೆಂಬ ಜಂಗಮಪುಂಗವರೋರ್ವರು ಆಗಮಿಸಿದರು. ಅವರು ಶ್ರೀ ಶೈಲದಿಂದ ಕಲ್ಯಾಣಾಭಿಮುಖವಾಗಿ ಪಾದಯಾತ್ರೆ ಕೈಕೊಂಡಿದ್ದರು. ಹಾದಿಯಲ್ಲಿ ಸಿಕ್ಕ ಮಹಾಂತ ಬೆಟ್ಟದಲ್ಲಿ ಅವರು ನಾಲ್ಕಾರು ದಿನ ತಂಗಿದ್ದರು.

ಎತ್ತರ ನಿಲುವಿನ ಕಾಷಾಯಾಂಬರದ ಆ ಜಂಗಮ ಮೂರ್ತಿಗಳು ತತ್ತ್ವವೇ ಮೈವೆತ್ತಂತೆ ಕಾಣಬರುತ್ತಿದ್ದರು. ಅವರು ಯಾರೊಂದಿಗೂ ಹೆಚ್ಚು ಮಾತನಾಡುತ್ತಿರಲಿಲ್ಲ. ಆದರೂ ಅವರ ಗಂಭೀರ ಮೌನವನ್ನು ಕಂಡವರೆಲ್ಲ ಅವರಿಂದ ತೀವ್ರ ಆಕರ್ಷಿತರಾಗುತ್ತಿದ್ದರು. ವಿಶಾಲ ಹಣೆಯ ಮೇಲೆ ಒಪ್ಪುವ ತ್ರಿಪುಂಡ್ರ, ನೇರ ನಾಸಿಕ, ಹೊಳೆವ ಕಣ್ಣು, ಬೋಳುದಲೆ, ಕಾಲಲ್ಲಿ ಆವುಗೆ, ಕೈಯಲ್ಲಿ ಕಮಂಡಲು ಹಿಡಿದು ಹೊರಟರೆ ಸಾಕ್ಷಾತ್ ಶಿವನೇ ನಡೆಯುತ್ತಿದ್ದಂತೆ ಭಾಸವಾಗುತ್ತಿತ್ತು.

ಮಡಿವಾಳಪ್ಪ ಅವರನ್ನು ಕಂಡು ಸಾಷ್ಟಾಂಗವೆರಗಿದ. ಮನಸ್ಸಿಗೆ ಅದೆಂಥದೋ ತಂಪು ಆವರಿಸಿದಂತಾಯಿತು. ಶಿವಯ್ಯನವರೂ ಮಡಿವಾಳನನ್ನೊಮ್ಮೆ ದೃಷ್ಟಿಸಿದರು. ಆ ಮುಖ್ಯವಲಯದಲ್ಲಿ ಏನನ್ನು ಗುರುತಿಸಿದರೋ ಮೆಲುನಗೆಯ ಅಲೆಯೊಂದು ಅವರ ಮುಖದಲ್ಲಿ ಮೂಡಿ ಮರೆಯಾಯಿತು. ಮಡಿವಾಳಪ್ಪ ಇದನ್ನು ಗಮನಿಸಿ ತನ್ನೊಳಗೇ ಸಮಾಧಾನ ಪಟ್ಟುಕೊಂಡನು.

ಅವರು ಅಲ್ಲಿದ್ದಷ್ಟು ದಿನ ಸದಾವಕಾಲವೂ ಯಾವುದೋ ಧ್ಯಾನಮುದ್ರೆಯಲ್ಲಿದ್ದಂತೆ ಕಾಣುತ್ತಿತು. ಮಡಿವಾಳಪ್ಪ ಅವರೊಂದಿಗೆ ಮಾತನಾಡಿ ತನ್ನ ಮನದ ಇಂಗಿತವನ್ನು ವ್ಯಕ್ತಪಡಿಸಬೇಕೆಂದಿದ್ದ. ಆದರೆ ಅದೇಕೋ ಅವರೊಂದಿಗೆ ಮಾತನಾಡುವುದಕ್ಕೂ ಆತನಿಗೆ ಭಯವುಂಟಾಗುತ್ತಿತ್ತು.

ಆದರೂ ಒಂದು ದಿನ ಬೆಳಗಿನ ಸಮಯ, ಅವರ ಪಾದಗಳಿಗೆ ಅಡ್ಡಬಿದ್ದು ಮೌನವಾಗಿಯೇ ತನ್ನ ಅಳಲನ್ನು ನಿವೇದಿಸಿದ. ನನ್ನ ಗತಿಮತಿ ನೀವೇ ಎಂದು ಹಂಬಲಿಸಿದ. ಆ ಜಂಗಮ ಮೂರ್ತಿಗಳು ಇದನ್ನು ಗ್ರಹಿಸಿದರು. ಅವನ ಅಳಲು ಯಾವುದೆಂಬುದನ್ನು ಅವನ ಮುಖವಲಯದಿಂದ ಗುರುತಿಸಿದರು. ಅವನ ಎದೆ, ಕೊರಳು ನೋಡಿದರು, ಬರಿದಾಗಿತ್ತು. ಒಡನೆ ಅವರು ಅಪ್ಪಣೆ ಕೊಡಿಸಿದರು.

"ಇಲ್ಲೇ ಜೇವರಗಿ ತಾಲೂಕಿನಲ್ಲಿ 'ಅರಳಗುಂಡಿಗೆ' ಎಂಬ ಗ್ರಾಮವಿದೆ. ಅಲ್ಲಿ ಶರಣ ಬಸವಪ್ಪನೆಂಬೋರ್ವ ಶರಣನಿದ್ದಾನೆ. ಆತನಿನಗಿಂತಲೂ ಹತ್ತು ವರ್ಷ ಹಿರಿಯನಿರಬಹುದು ಅಷ್ಟೆ. ಬಸವಾದಿ ಪ್ರಮಥರ ಹೆಜ್ಜೆಯಲ್ಲಿ ಶಿರವಿಟ್ಟು ನಡೆಯುವ ಧೀಮಂತ ಪುರುಷನಾತ. ಶರಣತತ್ತ್ವಗಳು ಆತನ ಪ್ರತಿಯೊಂದು ಚಟುವಟಿಕೆಗಳಲ್ಲೂ ನಿಬಿಡವಾಗಿ ಹೆಣೆದುಕೊಂಡಿವೆ. ಕಲ್ಯಾಣದ ಬಸವಣ್ಣನವರ ನೆನಪನ್ನು ಪುನರಪಿ ತಂದು ಕೊಡುತ್ತಿದ್ದಾನೆ. ಆತನ ಹತ್ತಿರ ಹೋಗು. ಅಲ್ಲಿ ನಿನ್ನ ಸಮಸ್ಯೆಗಳೇನೆಂಬುದನ್ನು ಮಂಡಿಸು. ಆತನಿಗೂ ಅದು

ಗ್ರಾಹ್ಯವಾಗಿ ಕಂಡೀತು. ನಿನ್ನಿಚ್ಛೆಯೂ ಪೂರ್ತಿಗೊಂಡೀತು."

ಮಡಿವಾಳಪ್ಪ ಈ ಮಾತುಗಳನ್ನು ಕೇಳಿ ಮೇರೆದಪ್ಪಿದ ಆನಂದದಲ್ಲಿ ಮುಳುಗಿದನು. ಕೃತಾರ್ಥನನ್ನಾಗಿ ಮಾಡಿದಿರಿ ಎಂದು ಮಗುದೊಮ್ಮೆ ಸಾಷ್ಟಾಂಗವೆರಗಿದನು.

ಅಂದಿನ ದಿನವೇ ಆ ಜಂಗಮ ಮೂರ್ತಿಗಳು ಕಲ್ಯಾಣ ದತ್ತ ನಡೆದರು. ಅವರನ್ನು ಗೌರವಾದರಗಳಿಂದ ಬೀಳ್ಕೊಟ್ಟು, ಮಲ್ಲಿಕಾರ್ಜುನಪ್ಪ ಗೌಡರೊಂದಿಗೆ ಅವರು ಹೇಳಿದ ಸಮಾಚಾರವನ್ನು ಸಮಾಲೋಚಿಸಿದನು. ಅವರು ಮರುಮಾತಿಲ್ಲದೆ ಸಮ್ಮತಿಸಿದರು. ಇಬ್ಬರೂ ಕೂಡಿಕೊಂಡೇ ಹೋಗಬೇಕೆಂದು ನಿರ್ಧರಿಸಿದರು.

ಅಂದಂತೆ ಒಂದೆರಡು ದಿನಗಳಲ್ಲೇ ಈರ್ವರೂ ಅರಳಗುಂಡಿಗೆ ಹಾದಿಹಿಡಿದು ಹೊರಟರು. ಹಾದಿಯಲ್ಲಾರೋ ಅವರನ್ನು ಎಲ್ಲಿಗೆ ಹೊರಟಿದ್ದೀರಿ? ಎಂದು ಕೇಳಿದರು. ಅದಕ್ಕೆ ಮಡಿವಾಳಪ್ಪ ಹಾಡುಕಟ್ಟೇ ಉತ್ತರಿಸಿದನು.

ನಾವು ನಡೆದೇವಮ್ಮ ನಮ್ಮ ತವರೂರಿಗೆ|
ಹೇಳಿ ಕೇಳಿ ಎಲ್ಲಾರಿಗೆ|
ನೀವು ನಡಿರಿ ಅಂಜಿ ನಿಮ್ಮ ಹಿರಿಯರಿಗೆ|
ಶಿವಶರಣರಿಗೆ|| ಪ ||

ಈ ಹಾಡು ಇದೇ ಉಪಮಾನವನ್ನು ಬಳಸಿಕೊಂಡು ಮುಂದೆ ಬಲು ಸೊಗಸಾಗಿ ಬೆಳೆದಿದೆ. ತವರು–ತವರುಮನೆ ಗಂಡ–ಗಂಡನ ಮನೆ ಎಲ್ಲವೂ ಇಲ್ಲಿ ಆಧ್ಯಾತ್ಮಿಕ ಪರಿವೇಷದಲ್ಲಿ ಸುತ್ತಿವೆ.

## ೩. ದೀಕ್ಷೆ–ಕ್ರಾಂತಿ

ಅರಳಗುಂಡಿಗೆಯನ್ನು ಇವರು ತಲುಪಿದಾಗ ಊರಲ್ಲಿ ಮಲ್ಲಿಕಾರ್ಜುನ ದೇವಾಲಯದ ಭಜನಾ ಸಮಾರೋಪ ಕಾರ್ಯಕ್ರಮ ಮುಂದೆ ಒಂದೆರಡು ದಿನಗಳಲ್ಲೇ ನಡೆಯಲಿತ್ತು. ಇದಕ್ಕಾಗಿ ಇಡೀ ಊರಿಗೆ ಊರೇ ಸಜ್ಜುಗೊಂಡಿತ್ತು. ಶರಣಬಸವಪ್ಪ ಅದರ ಮೇಲುಸ್ತುವಾರಿ ವಹಿಸಿದ್ದ.

ಇಂಥ ಸಂದರ್ಭದಲ್ಲಿ ತಾವು ಬಂದ ಕೆಲಸವನ್ನು ಶರಣಬಸಪಪ್ಪನಿಗೆ ತಿಳಿಸುವದು ಉಚಿತವೆನಿಸೀತೆ? ಎಂದು ಗೌಡರು ಹಿಂದೆ ಮುಂದೆ ನೋಡಿದರು. ಮಡಿವಾಳಪ್ಪನಿಗೋ ತೀವ್ರ ಆತುರ. ಶರಣಬಸವಪ್ಪನಿಗೂ ಇವರು ಯಾವುದೋ ಕಾರ್ಯ ನಿಮಿತ್ಯ ತನ್ನಲ್ಲಿಗೆ ಬಂದಿದ್ದಾರೆಂಬುದು ಗಮನಕ್ಕೆ ಬಂದಿತ್ತು. ಆತನೇ ನೇರವಾಗಿ ಆ ಬಗ್ಗೆ ವಿಚಾರಿಸಿದನು. ಆಗ ಮಡಿವಾಳಪ್ಪ ಹಾಗು ಮಲ್ಲಿಕಾರ್ಜುನಪ್ಪಗೌಡರು ಆತನೆದುರು ಈ ಕೆಳಗಿನ ಒಂದೆರಡು ಪ್ರಶ್ನೆಗಳನ್ನು ಮಂಡಿಸಿದರು. "ಬಿಲ್ವ ಪತ್ರೆಯ ಮರವೊಂದು ತಿಪ್ಪೆಯಲ್ಲಿ ಹುಟ್ಟಿ ಬೆಳೆದುದಾಗಿದ್ದರೆ ಆ ಮರದ ಬಿಲ್ವದಳಗಳು ಲಿಂಗಪೂಜೆಗೆ ಅರ್ಹವೆನಿಸಲಾರವೆ?" ಶರಣಬಸವಪ್ಪ ಈ ಪ್ರಶ್ನೆಗೆ ಏನೆಂದು

ಉತ್ತರಿಸುವನೋ ಎಂದು ಅವರು ಕಾತುರಗೊಂಡು ಆಲಿಸಿದ್ದರು. ಆದರೆ ಶರಣಬಸವಪ್ಪನಿಗೇನೂ ಇದು ಗಂಭೀರ ಪ್ರಶ್ನೆಯಾಗಿರಲಿಲ್ಲ. ಅತ್ಯಂತ ಸಹಜವಾದ ಧಾಟಿಯಲ್ಲಿಯೇ ನಿರ್ವಿಕಾರವಾಗಿ

"ಅದಕ್ಕೇನಂತೆ! ಬಿಲ್ವಮರ ಎಲ್ಲಿಹುಟ್ಟಿದರೇನು? ಅದೆಲ್ಲ ಭೂಮಿ ತಾನೆ! ತಿಪ್ಪೆಯಾಗಿದ್ದರೂ ಬಿಲ್ವಮರ ಅಲ್ಲಿ ಮೈದೋರಿದ್ದರಿಂದ ಅದು ಪವಿತ್ರವಾಯಿತು. ಅದು ಎಲ್ಲಿಯೇ ಬೆಳೆದಿರಲಿ, ಅದರ ಹುಟ್ಟು ಮುಖ್ಯವಲ್ಲ ಅದರ ಪಾವಿತ್ರ್ಯ ಮುಖ್ಯ. ತಿಪ್ಪೆಯಲ್ಲಿ ಹುಟ್ಟಿದ ಮಾತ್ರಕ್ಕೆ ಅದರ ಪಾವಿತ್ರ್ಯಕ್ಕೇನೂ ಚ್ಯುತಿ ಉಂಟಾಗಲಾರದು. ಅದು ಲಿಂಗಾರ್ಚನೆಗೆ ಸಲ್ಲುವದರಲ್ಲಿ ಸಂಶಯವೇ ಬೇಡ" ಎಂದು ನಿರ್ಧಾರದ ದನಿಯಲ್ಲಿ ನುಡಿದರು.

ಮಡಿವಾಳಪ್ಪ ಇದೇ ಉತ್ತರಕ್ಕಾಗಿಯೇ ಹಂಬಲಿಸಿದ್ದ. ಮರು ಆಲೋಚನೆ ಇಲ್ಲದೆ ಒಡನೆ ಹೀಗೆ ಸರಾಗವಾಗಿ ತಮ್ಮ ಪ್ರಶ್ನೆಗೆ ಉತ್ತರಿಸಿದ್ದು ಅವನನ್ನು ಅವಾಕ್ಕಾಗಿಸಿತ್ತು. ಆತನ ಜಳಜಳ ಮನಸ್ಸು ಅರಿವಿಗೆ ಬಂದು ಜಂಗಮ ಮೂರ್ತಿಗಳು ಆತನ ಬಗ್ಗೆ ಆಡಿದ್ದ "ಶರಣ ತತ್ತ್ವಗಳು ಆತನ ಪ್ರತಿಯೊಂದು ಚಟುವಟಿಕೆಗಳಲ್ಲಿ ನಿಬಿಡವಾಗಿ ಹೆಣೆದು ಕೊಂಡಿವೆ. ಕಲ್ಯಾಣದ ಬಸವಣ್ಣನವರ ನೆನಪನ್ನು ಪುನರಪಿ ತಂದುಕೊಡುತ್ತಿದ್ದಾನೆ". ಎಂಬ ಮಾತುಗಳು ಕಿವಿಯಲ್ಲಿ ರಿಂಗಣಗುಣಿದವು. ಮನಸ್ಸು ಮೂಕಾಯಿತು. ಮಲ್ಲಿಕಾರ್ಜುನಪ್ಪಗೌಡರು ಆಗ ತಾವು

ಬಂದ ಕಾರ್ಯವನ್ನು ವಿವರಿಸುತ್ತ ತಾವು ದಯವಿಟ್ಟು ಈ ಮಡಿವಾಳಪ್ಪನಿಗೆ ಲಿಂಗ ದೀಕ್ಷೆ ಮಾಡಿಸಿ ಕೃತ ಕೃತ್ಯನನ್ನಾಗಿಸಬೇಕು. ಆತನ ಹುಟ್ಟು ಬೆಳವಣಿಗೆ ಸಂಪೂರ್ಣ ಬಿಲ್ವವೃಕ್ಷಕ್ಕೆ ಹೋಲುವಂಥದು. ಅಂಥ ಬಿಲ್ವವೃಕ್ಷದ ದಳಗಳು ಲಿಂಗದೇವನ ಮುಡಿಗೇರುವಂತಿದ್ದರೆ–ಏರುತ್ತವೆಂದು ತಾವು ಈಗಾಗಲೇ ಹೇಳಿದ್ದೀರಿ ಕೂಡಾ–ಮಡಿವಾಳಪ್ಪನೂ ಲಿಂಗ ದೀಕ್ಷೆಗೆ ಯೋಗ್ಯನೇ ಆಗುತ್ತಾನೆ. ಇಂಥ ಕಾರ್ಯ ನೆರವೇರಿಸುವದು ತಮ್ಮಿಂದ ಮಾತ್ರ ಸಾಧ್ಯವೆಂದು ಕೇಳಿ ಇಲ್ಲಿಗೆ ಬಂದಿದ್ದೇವೆ. ತಾವು ಕೈ ಬಿಡಬಾರದು..." ಎಂದು ವಿನಮ್ರನಾಗಿ ಬೇಡಿಕೊಂಡನು.

ಈ ಬೇಡಿಕೆಗೆ ಶರಣಬಸವಪ್ಪನವರ ಒಮ್ಮನದ ಒಪ್ಪಿಗೆ ಸಿಕ್ಕಿತು. ಆಗ ಮಡಿವಾಳನಿಗಾದ ಸಂತೋಷ ಅಷ್ಟಿಷ್ಟಲ್ಲ. ಶರಣಬಸವಪ್ಪನ "ಸರ್ವಜೀವ ಮನ್ನಣೆ"ಯ ಸ್ವಭಾವ ಆತನನ್ನು ಪುಲಕಿತಗೊಳಿಸಿತು. ಅನ್ಯರಂತೆ ಹಿಂದು ಮುಂದು ನೋಡದೆ ಒಂದೇ ಮಾತಿನಲ್ಲಿ ತನಗೆ ಲಿಂಗದೀಕ್ಷೆ ನೀಡುವದಕ್ಕೆ ಒಪ್ಪಿಗೆ ಕೊಟ್ಟ ಆತನ ನಿರ್ಭೀತ ವ್ಯಕ್ತಿತ್ವವನ್ನು ಕಂಡು ಕವಿ ಮಡಿವಾಳಪ್ಪ ಎಚ್ಚರಗೊಂಡ. ಎದೆದುಂಬಿ ಬಂತು. ಶರಣಬಸವಪ್ಪನವರ ಧೀರ ಗಂಭೀರ ವ್ಯಕ್ತಿತ್ವವನ್ನು ಹೀಗೆ ಕಡೆದು ಹಾಡಿದ.

ಆವ ಭಯವು ಇನ್ನೇನವಗ|
ಮಾಯ ನಿರ್ಮಾಯನಾದವಗ||
ಹುಟ್ಟೋದು ಸಾವೋದು ಜೀವಭಾವ|
ಸಾವೇನು ಜೀವೇನು ನೋವೇನವಗ || ಪ ||

ಮಡಿವಾಳಪ್ಪನವರಲ್ಲಿ ಹುದುಗಿದ್ದ ಕಾವ್ಯಪ್ರತಿಭೆ-ಆಧ್ಯಾತ್ಮಿಕ ಎತ್ತರಗಳನ್ನು ಶರಣಬಸವಪ್ಪ ಕಂಡುಕೊಂಡ. ಅಂದಿನ ದಿನ ಸಾಯಂಕಾಲ ಭಜನೆಗೆ ಕರೆದೊಯ್ದು ಅಲ್ಲಿ ಈತನಿಂದ ಹಾಡು ಕೇಳಿಸಿದ. ಭಜನಾಮಂಡಳಿಯವರೆಲ್ಲ ಮಡಿವಾಳಪ್ಪನ ಹಾಡುಗಾರಿಕೆಯನ್ನು ಮೆಚ್ಚಿಕೊಂಡರು. ಆತನಃ ಹಾಡಿದ ಹಾಡುಗಳನ್ನು ತಾವು ಕಲಿತು ಹಾಡಬೇಕೆಂಬ ತವಕ ವ್ಯಕ್ತಪಡಿಸಿದರು.

ಶರಣಬಸವಪ್ಪ ಮಾರನೆಯ ದಿನವೇ ಊರಿನ ಮುಖಂಡರ ಸಭೆ ಕರೆದು ಮಡಿವಾಳಪ್ಪನ ಅಭೀಪ್ಸೆಯನ್ನು ತಿಳಿಸಿ ಆತನಿಗೆ ದೀಕ್ಷೆ ನೀಡುವ ಆವಶ್ಯಕತೆಯನ್ನು ಒತ್ತಿ ಹೇಳಿದನು. ಶರಣಧರ್ಮವು ಎಲ್ಲ ಜಿಜ್ಞಾಸುಗಳಿಗೂ ತೆರೆದ ಬಾಗಿಲಾಗಿದೆಯೆಂದೂ ಆ ಮೇರೆಗೆ ಮಡಿವಾಳಪ್ಪನಿಗೆ ನಾವು ಸ್ವಾಗತವೀಯಬೇಕೆಂದೂ ಬಿನ್ನವಿಸಿದನು.

ಓರಗೆಯ ಮಿತ್ರರಲ್ಲಿ ಹಲವರು ಹೃತ್ಪೂರ್ವಕವಾಗಿ ಇದನ್ನೊಪ್ಪಿಕೊಂಡರು. ಇನ್ನುಳಿದ ಕೆಲವರು ಅರೆಮನಸ್ಸಿನಿಂದ ಸಮ್ಮತಿ ಸೂಚಿಸಿದರು. ಮತ್ತೆ ಸ್ವಲ್ಪ ಜನ ಅಸಮ್ಮತಿ ವ್ಯಕ್ತಪಡಿಸಿ ಅಲ್ಲಿಂದ ಎದ್ದು ಹೋದರು.

ಸರ್ವರ ಸಮ್ಮತಿಯನ್ನು ಪಡೆದುಕೊಂಡೇ ಎಲ್ಲರೆದುರಿನಲ್ಲಿ ಭಜನಾ ಸಮಾರಂಭದ ಮುಕ್ತಾಯದ ದಿನದಂದು ದೀಕ್ಷಾ ಕಾರ್ಯವನ್ನು ನೆರವೇರಿಸಬೇಕೆಂದು ಶರಣಬಸವಪ್ಪ ಬಯಸಿದ್ದನು. ಎಲ್ಲರೂ ತನ್ನ ವಿಚಾರಗಳನ್ನು ಅನುಮೋದಿಸ

ಬಹುದೆಂದೂ ಭಾವಿಸಿದ್ದನು. ಆದರೆ ಅದು ಅವನೆಣಿಕೆಯನ್ನು ತಪ್ಪಿಸಿತು.

ಅವನೂ ತನ್ನ ನಿರ್ಧಾರದಿಂದ ವಿಚಲಿತನಾಗಲಿಲ್ಲ. ಒಪ್ಪಿಗೆಯಾಗದವರೂ ಮುಂದೆ ಒಪ್ಪಿಗೆ ನೀಡಬಹುದೆಂದು ತನ್ನಲ್ಲೇ ಗುಣಿಸಿಕೊಂಡನು. ದೀಕ್ಷಾಕಾರ್ಯ ಪೂರೈಸಲು ತಕ್ಕವರಾದ ತನ್ನ ಮನೆಗುರುಗಳಾದ ಹಳಿಪ್ಯಾಟಿ ಬಸಯ್ಯ ನವರನ್ನು ವಿನಂತಿಸಿಕೊಳ್ಳಹೋದರೆ, ಅವರು ಕನಲಿ ಹಲವು ಕಿಡಿನುಡಿಗಳನ್ನಾಡಿದರು. ಧರ್ಮದ್ರೋಹಿ ಎಂದು ನಿಂದಿಸಿದರು.

ಆ ನಿಂದನೆಯ ನುಡಿಗಳನ್ನು ಕೇಳಿ ಶರಣಬಸವಪ್ಪ ಬಹುವಾಗಿ ಆಲೋಚಿಸಿದನು. ಲಿಂಗದೀಕ್ಷೆ ನೀಡುವುದು ಧರ್ಮದ್ರೋಹ ಕಾರ್ಯವೆ? 'ಲಿಂಗ' ಯಾರದಾದರೂ ಗುತ್ತಿಗೆಯ ವಸ್ತುವೆ? ದೇವರನ್ನು ನೀಡಿ ಆ ಮೂಲಕ ಯಾರನ್ನಾದರೂ ಧರ್ಮೀಯನನ್ನಾಗಿ ಮಾಡುವುದು ತಪ್ಪೆ? ಬಸವಾದಿ ಪ್ರಮಥರು ಜಾತಿ, ಮತ ಪಂಥವೊಂದನ್ನೂ ಎಣಿಸದೆ ಸರ್ವಮಾನವರಿಗೂ ಲಿಂಗದೀಕ್ಷೆ ನೀಡಿ ದೇವನೊಬ್ಬನೆಂಬುದನ್ನು ಸ್ಥಾಪಿಸಲಿಲ್ಲವೆ? ಎಂದು ಮುಂತಾಗಿ ತನ್ನನ್ನೇ ತಾನು ಪ್ರಶ್ನಿಸಿಕೊಂಡನು.

ಹಳಿಪ್ಯಾಟಿ ಬಸಯ್ಯನವರು ಲಿಂಗದೀಕ್ಷೆಯನ್ನು ಸ್ವತಃ ತಾವು ನೀಡುವುದೊತ್ತಟ್ಟಿಗಿರಲಿ, ದೀಕ್ಷೆ ನೀಡಲಲೆಳೆಸುವದನ್ನು

ಧರ್ಮದ್ರೋಹವೆಂದು ಬಗೆದಿರುವರು. ಅಂದಬಳಿಕ, ಮಡಿವಾಳನಿಗೆ ದೀಕ್ಷೆ ನೀಡಿಸುವದು ಹೇಗೆ? ಯಾರಿಂದ?

ಆ ರಾತ್ರಿ ಶರಣಬಸವನಿಗೆ ನಿದ್ರೆಯೇ ಬರಲಿಲ್ಲ. ಮನಸ್ಸು ಹೊಯ್ದಾಟಕ್ಕೀಡಾಗಿತ್ತು. ಒಂದು ಕಡೆ ತತ್ತ್ವ, ಇನ್ನೊಂದು ಕಡೆ ಅದನ್ನು ವಿರೋಧಿಸುವ ಸಮಾಜ. ಒಂದು ಕಡೆ ಆತ್ಮಿಕ ಅಭಿಲಾಷೆ, ಮತ್ತೊಂದು ಕಡೆ ಸಾಮಾಜಿಕ ಅಡಿತಡೆ.

ತಾನೀಗ ತತ್ತ್ವನಿಷ್ಠನಾಗಿ ಲೋಕ ವಿರೋಧ ಕಟ್ಟಿಕೊಳ್ಳಬೇಕೋ ಅಥವಾ ಲೌಕಿಕಕ್ಕೆ ಬೆದರಿ ತತ್ತ್ವಭ್ರಷ್ಟನಾಗಬೇಕೋ?

ಕೊನೆಗೆ ಒಂದು ನಿರ್ಧಾರಕ್ಕೆ ಬಂದರು. "ಏನೇ ಆಗಲಿ, ಯಾರೇ ವಿರೊಧಿಸಲಿ, ಲಿಂಗದೀಕ್ಷಾ ಕಾರ್ಯವನ್ನು ನೆರವೇರಿಸಲೇಬೇಕು". ತನ್ನ ದೀಕ್ಷಾಗುರುಗಳಾದ ಕಲಕೇರಿಯ ಮರುಳಾರಾಧ್ಯರಲ್ಲಿ ಈ ವಿಷಯವನ್ನು ವಿನಂತಿಸಿ ಅವರಿಂದಲೇ ದೀಕ್ಷೆ ನೀಡಿಸೋಣ" ಎಂದು ಬಗೆದರು.

ಮರುಳಾರಾಧ್ಯರಿದ್ದ ಕಲಕೇರಿಗೆ ಈ ಸಮಾಚಾರವನ್ನು ಹೇಳಿ ಕಳಿಸಿದರು. ಅವರು ಮರು ಮಾತಿಲ್ಲದೆ ಒಪ್ಪಿಕೊಂಡರಲ್ಲದೆ ನಾಳಿನ ದಿನ ನಡೆಯಲಿದ್ದ ಭಜನಾ ಸಮಾರೋಪದಲ್ಲೇ ತಾನು ಆ ಕಾರ್ಯ ನೆರವೇರಿಸುವದಾಗಿ ಒಪ್ಪಿಗೆ ಕೊಟ್ಟು ಅರಳಗುಂಡಿಗೆಗೆ ಹೊರಟು ಬಂದರು.

ಮೊದಲೇ ನಿರ್ಧರಿಸಲ್ಪಟ್ಟಂತೆ ಮಲ್ಲಿಕಾರ್ಜುನ ದೇವಾಲಯದಲ್ಲೇ ದೀಕ್ಷಾ ಸಮಾರಂಭದ ಸಜ್ಜುಗಳು ನಡೆಯುತ್ತಿದ್ದವು. ಇದನ್ನು ಗಮನಿಸಿದ ಹಳಿಪ್ಯಾಟಿ ಬಸಯ್ಯನವರು ತಮ್ಮ ಮಠದಲ್ಲೊಂದು ಸಭೆ ಕರೆದು "ಮಡಿವಾಳಪ್ಪನಿಗೆ ದೀಕ್ಷೆ ಮಾಡುವದು ಧರ್ಮದ್ರೋಹ ಕಾರ್ಯವಾಗುತ್ತದೆಂದೂ, ಇಂಥದಕ್ಕೆ ತಮ್ಮ ಧರ್ಮದಲ್ಲಿ ಅವಕಾಶವಿಲ್ಲವೆಂದೂ, ಧರ್ಮವನ್ನು ಬಿಟ್ಟು ನಡೆದರೆ ಸರ್ವನಾಶ ಕಟ್ಟಿಟ್ಟದ್ದೆಂದೂ" ಮಂಡಿಸಿದರು. ವಿಚಿತ್ರವೇನಂದರೆ ಅಂದು ಬಸಯ್ಯನವರ ಮಾತುಗಳೇ ಸರ್ವರಿಗೂ ಗ್ರಾಹ್ಯವೆನಿಸಿದುವು. ಲಿಂಗದೀಕ್ಷಾ ಕಾರ್ಯವನ್ನು ನಡೆಯಗೊಡಬಾರದೆಂದು ಆ ಸಭೆಯಲ್ಲಿ ತೀರ್ಮಾನ ಕೈಕೊಂಡರು. ಎಲ್ಲರೂ ನಿರೀಕ್ಷಿಸಿದಂತೆ ಮಾರನೆಯ ದಿನ ಬಂತು. ಆದರೆ ಮಲ್ಲಿಕಾರ್ಜುನ ದೇವಾಲಯದಲ್ಲಿ ದೀಕ್ಷೆ ನಡೆಯಲಿಲ್ಲ. ದೀಕ್ಷೆ ನಡೆದಿದ್ದರೆ ಅದನ್ನು ಭಂಗಪಡಿಸಬೇಕೆಂದು ಹಲವು ಅವಿವೇಕಿಗಳು ಬಸಯ್ಯನವರಿಂದ ಪ್ರೇರಿತರಾಗಿ ಹೊಂಚಿಕೊಂಡಿದ್ದರು.

ನಿರೀಕ್ಷಿಸಿದ ಕಾರ್ಯ ಅಲ್ಲಿ ನಡೆಯದಿದ್ದುದಕ್ಕೆ ಶರಣಬಸವಪ್ಪ ತಮಗೆ ಹೆದರಿದನೆಂದೂ ಮತ್ತೆ ಮುಂದೆ ಎಂದಾದರೂ ಈ ಉಪದ್ವ್ಯಾಪ ಮಾಡಿದನಾದರೆ ತಮ್ಮ ಕುಡಗೋಲಿಗೆ ಅವನನ್ನು ಆಹಾರ ಮಾಡಿಬಿಡಬೇಕೆಂದೂ ತಮ್ಮ ತಮ್ಮೊಳಗೆ ಮಾತನಾಡಿಕೊಂಡು ಮೀಸೆ ಹುರಿ ಹಾಕಿಕೊಳ್ಳುತ್ತ ಮನೆಯತ್ತ ಸಾಗಿದರು.

ಈ ಸಂಗತಿಯನ್ನು ಮೊದಲೇ ಅರಿತಿದ್ದ ಶರಣಬಸವಪ್ಪನವರು ಮಲ್ಲಿಕಾರ್ಜುನ ದೇವಾಲಯದಲ್ಲೇ ದೀಕ್ಷೆ ಮಾಡಿಸಬೇಕೆಂದಿದ್ದ ತಮ್ಮ ಮೊದಲಿನ ನಿರ್ಧಾರವನ್ನು ಬದಲಿಸಿ ಹೆಚ್ಚು ಪ್ರಚಾರಕ್ಕೆ ಅವಕಾಶ ಕೊಡಬಾರದೆಂದು ಬಗೆದು ತಮ್ಮ ಮನೆಯಲ್ಲೇ ಅದಕ್ಕೆ ತಕ್ಕ ವ್ಯವಸ್ಥೆಯನ್ನು ಮಾಡಿಸಿದರು.

ಗುರು ಮರುಳಾರಾಧ್ಯರು ಆಗಮಿಸಿ ವಿಧಿವತ್ತಾಗಿ ಮಡಿವಾಳಪ್ಪನ ತನುಮನ ಭಾವಗಳಲ್ಲಿ "ರಸದ ಹೊರಲೇಪದಲಿ ಹುದುಗಿದ ಮಿಸುನಿ"ಯಂತೆ ಹುದುಗಿದ್ದ ಚಿತ್ಪ್ರಕಾಶ ರೂಪವನ್ನು ಕ್ರಮಗೊಳಿಸಿ ಭಾವ-ಭಾವದಿಂದ ಮನ-ಮನದಿಂದ ತನುವಿಗೆ ಅಳವಡಿಸಿಕೊಟ್ಟರು.

ಆಗಿನಿಂದ ಮಡಿವಾಳಪ್ಪ ಕಣ್ಣೊಳಗೆ ಕಣ್ಣಿಟ್ಟು ಕಾಣಲು ಸಮರ್ಥನಾದ. ಕಿವಿಯಲ್ಲಿ ಕಿವಿಯಿಟ್ಟು ಕೇಳಲು ತಕ್ಕವನಾದ.

"ಆಡಬಾರದ ಬಯಲು, ನೋಡಬಾರದ ಬಯಲು, ನುಡಿಯಬಾರದ ಬಯಲು, ಹಿಡಿಯಬಾರದ ಬಯಲು, ಒಡಲಿಲ್ಲದ ಬಯಲೊಳಗಡಗಿಪ್ಪ ಭೇದವ" ಅರಿಯುವ ತ್ರಾಣ ಪಡೆದವನಾದ.

ಈ ಘಟನೆ ಆತನ ಬದುಕಿನ ಸಾಸಿವೆಯ ಮೇಲೆ ಸಾಗರ ವರಿದಂತಾಗಿತ್ತು. ಭಾವದ ಮರೆಯ ಬ್ರಹ್ಮ-ನೆಲದ ಮರೆಯ ನಿಧಾನ ಮಾತಾಡಿದಂತಾಗಿತ್ತು. ಕಾವ್ಯದನಿ ಹೊರಹೊಮ್ಮ

ಎಂಥ ಆಕಳ ಕೊಟ್ಟ ಗುರು ಕಾಮಧೇನ
ಹಗಲು ಇರುಳು ಹಾಲು ಕರೆವದೊಂದೆ ಸವನ||
ಉಂಡು ನೋಡಿದವನೆ ಬಲ್ಲ ಇದರ ಹೈನ
ಬೆಲೆ ಮಾಡುವರಿಲ್ಲಪ್ಪ ಅದರ ಸವನ||

ಆಕಳಿರುವ ಸ್ಥಳ ಶಿವಪುರದಲ್ಲಿ
ಬಲ್ಲವರಿಗಿ ತಿಳಿದಿತ್ತಪ್ಪ ಅದರ ನೆಲಿ||
ಆಕಳಿಗಿ ಇದ್ದಿತಪ್ಪ, ಸಾವಿರ ಮೊಲಿ
ಮಹಾಂತೇಶ ಹೆಸರಿನ ಮ್ಯಾಲೆ ಬಿಟ್ಟದಪ್ಪ ಈ ಕಪಿಲೆ||
ಎಂದು ಹಾಡಿತು.

ಸತ್ಯಕ್ಕೆ, ಶಿವಕ್ಕೆ, ಜ್ಞಾನಕ್ಕೆ, ಅನಂತಕ್ಕೆ, ನಿತ್ಯಪರಿಪೂರ್ಣನಾದ ಅಖಂಡ ಲಿಂಗಕ್ಕೆ ಇಲ್ಲಿ ಮಡಿವಾಳಪ್ಪ ಕಾಮಧೇನುವಿನ ಪ್ರತಿಮೆ ನೀಡಿ ಹೋಲಿಸಿ-ಹಾಡಿ ಇದು ಹಗಲಿರುಳು ಹಾಲು ಕರೆಯುತ್ತದೆಂದೂ, ಇದರ ರುಚಿ ಉಂಡು ನೋಡಿದವನಿಗೆ ಮಾತ್ರ ತಿಳಿಯುತ್ತದೆಂದೂ ತನ್ನ ಅನುಭಾವವನ್ನು ಹೇಳಿದನು. ಇತ್ತ ಭಜನೆಯು ಸಮಾರೋಪ ಕಾರ್ಯವೂ ಮುಗಿಯಿತು. ಒಂದೆರಡು ದಿನ ಕಳೆದಿರಬೇಕು. ಅದು ಹೇಗೋ ಮಡಿವಾಳಪ್ಪನಿಗೆ ಲಿಂಗದೀಕ್ಷೆಯಾದ ಸುದ್ದಿ ಊರು ತುಂಬ ಕರಾಳ ಘಟನೆಯೆಂಬಂತೆ ಹಬ್ಬಿಕೊಂಡಿತು. ಹೆಂಗಳೆಯರಿಂದ ಹಿಡಿದು ಏನೂ ಅರಿಯದ ಹುಡುಗರವರೆಗೆ ಇದರ ಬಗ್ಗೆ ಟೀಕೆ ಟಿಪ್ಪಣಿಗಳು ನಡೆದವು. ಊರಿನ ಮುಖ್ಯಸ್ಥ

ರಂತೂ ಶರಣಬಸವಪ್ಪನವರ ಕಾರ್ಯವನ್ನು ಕಟುವಾಗಿ ಹೀಗಳೆದರು. ಪ್ಯಾಟಿ ಬಸಯ್ಯನವರ ಆಟಾಟೋಪಗಳಿಗೆ ಮೇರೆಯೇ ಇರಲಿಲ್ಲ. ಬಾಯಿತೆರೆದರೆ ಅವರ ಬಾಯಿಯಿಂದ ಮಡಿವಾಳಪ್ಪ ಶರಣಬಸವಪ್ಪರ ನಿಂದನೆಯ ಮುಕ್ತಕಗಳೇ ಉದುರಿ ಬೀಳುತ್ತಿದ್ದವು. ಅವರನ್ನು ಸಮಾಜದಿಂದಲೇ ಹೊರ ಗಿಡಬೇಕೆಂಬ ದುಷ್ಟ ಸಲಹೆಯನ್ನು ಮುಂದೆ ಮಾಡಿದರು. ಯಾರು ಧರ್ಮವನ್ನು ಹೋಲೆಗೆಡಿಸಿದ್ದಾರೊ ಅಂಥವರನ್ನು ಸಮಾಜದಲ್ಲಿಟ್ಟುಕೊಂಡರೆ ಆ ಪಾಪ ತಮಗೂ ತಗುಲಿದಂತಾ ಗುವದೆಂಬ ತಮ್ಮ ಹೊಸ ತತ್ತ್ವವನ್ನು ಹರಿಯಬಿಟ್ಟರು.

ಧರ್ಮಾಧರ್ಮ ವಿವೇಚನೆಯಿಲ್ಲದ ಜನ ಹಳಿಪ್ಯಾಟಿ ಬಸಯ್ಯನವರ ಸಲಹೆಗಳನ್ನೆಲ್ಲ ಯೋಗ್ಯ ಸಲಹೆಗಳೆಂದೇ ಭಾವಿಸಿತು. ಶಂಖದಿಂದ ಸುರೆಬಿದ್ದರೂ ಅದನ್ನು ಗುರುತಿ ಸದೆ ಅಮೃತವೆಂದೇ ಭಾವಿಸಿ ಸ್ವೀಕರಿಸುವವರ ಸಂಖ್ಯೆಯೇ ಹೆಚ್ಚಾಗಿದ್ದ ಆ ಸಮಯದಲ್ಲಿ ಬಸಯ್ಯನವರ ಹುನ್ನಾರಗಳೆಲ್ಲ ಫಲಕಾರಿಯಾದುವು. ಮತ್ತೊಮ್ಮೆ ಸಮಾಜದ ಪ್ರಮುಖರೆಲ್ಲ ಒಂದೆಡೆ ಸಭೆ ಸೇರಿ ಶರಣಬಸವಪ್ಪನನ್ನು ಸಮಾಜದಿಂದ ಬಹಿಷ್ಕರಿಸುವ ನಿರ್ಣಯವನ್ನು ಸ್ವೀಕರಿಸಿದರು. ಅತ್ಯಂತ ಹೀನಾಯವಾದ ಶಬ್ದಗಳಲ್ಲಿ ಆತನನ್ನು ಖಂಡಿಸಿದರು.

ಮಾರನೆಯ ದಿನವೇ ಆತನನ್ನು ಸಮಾಜದಿಂದ ಬಹಿ ಷ್ಕರಿಸಲಾಯಿತು. ಆತನೊಂದಿಗೆ ಊರಲ್ಲಿ ಯಾರೂ ಉಣ್ಣುವ ತಿನ್ನುವ ಹೆಣ್ಣು-ಗಂಡು ಕೊಟ್ಟು ತೆಗೆದುಕೊಳ್ಳುವ ಸಾಮಾ

ಜಿಕ ಸಂಬಂಧದ ಕಾರ್ಯ ಮಾಡಬಾರದೆಂದು ಡಂಗುರ ಸಾರಲಾಯಿತು.

ಮಡಿವಾಳಪ್ಪ ಊರವರ ಈ ಅಕೃತ್ಯವನ್ನು ಕಂಡು ಕನಲಿ ಹೋದನು. ಆದರೆ ಮಲ್ಲಿಕಾರ್ಜುನಪ್ಪಗೌಡರೊಬ್ಬರಿಗೆ ಮಾತ್ರ ಇದರಿಂದ ಸಿಟ್ಟು ಬಂದಿರಲಿಲ್ಲ. ಸೋಜಿಗವೂ ಉಂಟಾಗಿರಲಿಲ್ಲ. ಹೀಗೆ ಆಗಿಯೇ ಆಗುತ್ತದೆಂಬ ಸಹಜಭಾವ ಅವರದು.

ಶರಣಬಸವಪ್ಪನವರಿಗೆ ತಾನು ತತ್ತ್ವವನ್ನು ನಡೆಸಿದ್ದೇನೆಂಬ ಸಮಾಧಾನವಿತ್ತಾದರೂ ಊರವರು ಇಷ್ಟೊಂದು ಕೃದ್ಧರಾದಾರೆಂಬ ಎಣಿಕೆ ಇರಲಿಲ್ಲ. ಪರಮಧಾರ್ಮಿಕ ಕಾರ್ಯವನ್ನು ಇಷ್ಟೊಂದು ಅಧಾರ್ಮಿಕ ಅಮಾನವಿಕವಾಗಿ ಭಾವಿಸಬಹುದೆಂದು ತಿಳಿದಿರಲಿಲ್ಲ. ತಮ್ಮನ್ನು ಸಮಾಜದಿಂದ ಬಹಿಷ್ಕರಿಸಿದ್ದಾಗಲೀ, ನಿಂದನೆಯ ನುಡಿಗಳಿಂದ ತನ್ನನ್ನು ಬಯ್ದುದ್ದಾಗಲೀ, ಅವರ ಮನಸ್ಸಿಗೆ ಅಷ್ಟಾಗಿ ನೋವು ಮಾಡಿರಲಿಲ್ಲ. ಬಸವಾದಿ ಪ್ರಮಥರು ಸಕಲರಿಗೂ ತೆರೆದಿಟ್ಟಂಥ ಬಾಗಿಲನ್ನು ಮುಚ್ಚುವ ಹುಚ್ಚು ಹವ್ಯಾಸಕ್ಕೆ ಜನತೆ ಇಳಿದದ್ದು ಆತನಿಗೆ ತೀವ್ರ ಸಂಕಟ ಉಂಟುಮಾಡಿತ್ತು. ಮ್ಲಾನವದನನಾಗಿ ಮಂಡಿಸಿದ್ದ.

ಮಲ್ಲಿಕಾರ್ಜುನಪ್ಪಗೌಡ ಇದನ್ನು ಗ್ರಹಿಸಿ ಮಡಿವಾಳಪ್ಪನ ಗಮನಕ್ಕೂ ತಂದ. ಮಡಿವಾಳಪ್ಪ ಒಮ್ಮೆ ಶರಣಬಸವಪ್ಪ

ನವರ ಮುಖವನ್ನು ನೋಡಿದ "ತನ್ನಿಂದಾಗಿ ಶರಣಬಸವಪ್ಪ ಸಲ್ಲದ ಆಕ್ಷೇಪಗಳಿಗೆ ಗುರಿಯಾದ. ಸಮಾಜದ ಬಹಿಷ್ಕಾರಕ್ಕೂ ಈಡಾದ" ಎಂದು ನೊಂದುಕೊಂಡ.

ಆದರೆ ತಾವಿಬ್ಬರು ಮತ್ತೊಮ್ಮೆ ಬಸವಾದಿ ಪ್ರಮಥರ ತತ್ತ್ವವನ್ನು ಪ್ರತಿಷ್ಠಾಪಿಸಿದ್ದೇವೆ. ಅದಕ್ಕಾಗಿ ಯಾರೇನೆಂದರೂ ಓರಂತಿರಬೇಕು. ಅರಿಯದ ಅಜ್ಞಾನಿಗಳು ಹಲವು ಆಡುತ್ತಾರೆಂದು ನೊಂದುಕೊಳ್ಳುವದು ತರವೆ? ಸಂತೆಯು ಶಬ್ದಕ್ಕೆ ಅಳುಕಿದರೆ ಹೇಗೆ? ತತ್ತ್ವ ಪ್ರತಿಷ್ಠಾಪಿಸುವಾಗ ಹೀಗಾಗುವದು ಸಹಜವೇ ಇರಬೇಕು.

ಮಲ್ಲಿಕಾರ್ಜುನಪ್ಪಗೌಡನನ್ನೊಮ್ಮೆ ನೋಡಿದ. ಅವರ ಮುಖದ ಮೇಲೆ ಯಾವ ಆತಂಕದ ಚಿನ್ಹೆಯೇ ಕಾಣಿಸಲಿಲ್ಲ. ಮನಸ್ಸು ಘುಳು ಘುಳಿಸಿತು. ಭಾವ ಕಳವಳಿಸಿತು. ಒಮ್ಮೆಲೇ ಹಾಡು ಮೂಡಿ ಬಂತು.

ಆರು ತನಗೇನಂದರೇನು |ಆಗೋ ಸಮಾಧಾನ
ದೇವನು ತಾನಾದ ಮ್ಯಾಲೆ| ವಾಸನೆ ಹೋದದ್ದೆ
ಕೂನ||

ಅರಿಯದ ಜ್ಞಾನಿ ಮೊದಲು ಎಲ್ಲರೊಂದೆಯಾಗಿ
ಇಲ್ಲದ್ದೊಂದು ಮಾತು ಕೇಳಿ ಬಲ್ಲೆನೆಂಬುದು ನೀಗಿ

ಸೊಲ್ಲು ಸೊಲ್ಲಿನಲಿ ಬಲ್ಲವರ ನಿಂದೆ ಮಾಡಿ ||೧||
ಹತ್ತು ಮಂದಿ ಕೂಡಿ| ಒಂದು ಗೊತ್ತಿಗಿ
ಹೋಗಲಾಗಿ|
ಸತ್ತದ್ದೊಂದು ಕಂಡ ಆವರು| ಮುತ್ತಿಕೊಂಡು
ಹೋಗಿ|
ಉತ್ತಮನೊಬ್ಬ ಒಲ್ಲೊಲ್ಲೆಂದ್ರೆ| ನೆತ್ತಿ
ಬಡದ್ರುಕಾಗಿ ||೨||

ಆಗ ಶರಣಬಸವಪ್ಪ ಬಾಯಿಬಿಚ್ಚಿದ. ತನಗೆ ದುಗುಡ ಉಂಟಾದುದು ಏತಕ್ಕಾಗಿ? ಎಂಬುದನ್ನು ತಿಳಿಸಿದ. ಅದಕ್ಕೆ ಅವರೂ ಒಪ್ಪಿಕೊಂಡರು.

ತಾವಿನ್ನು ಅರಳಗುಂಡಿಗೆಯಲ್ಲಿ ಹೆಚ್ಚು ದಿನ ಇರುವದು ತರವಲ್ಲವೆಂದು ಬಗೆದು ಶರಣಬಸವಪ್ಪನಿಂದ ಅಪ್ಪಣೆ ಕೇಳಿದರು. ಆದರೆ ಆತ ತೀವ್ರ ಒಪ್ಪಿಗೆ ಕೊಡಲಿಲ್ಲ. ಎಲ್ಲರಿಂದ ದೂರೀಕರಿಸಲ್ಪಟ್ಟ ಸ್ಥಿತಿಯಲ್ಲಿ ಆತನನ್ನು ಒಂಟಿಯಾಗಿ ಬಿಟ್ಟು ಹೋಗುವದಕ್ಕೂ ಇವರ ಮನಸ್ಸು ಅಳುಕದಿರಲಿಲ್ಲ. ತಾವು ಹೆಚ್ಚು ದಿನ ವಾಸ್ತವ್ಯ ಹೂಡುವದು ಆತನ ಹಿತದೃಷ್ಟಿಯಿಂದಲೇ ಒಳ್ಳೆಯದಲ್ಲವೆಂದು ಭಾವಿಸಿ ಇನ್ನೊಮ್ಮೆ ಬರುವುದಾಗಿ ಮಾತು ಕೊಟ್ಟು ಅಲ್ಲಿಂದ ಬೀಳ್ಕೊಂಡರು ಭಾರವಾದ ಮನಸ್ಸಿನಿಂದ ಒಬ್ಬರನ್ನೊಬ್ಬರು ಅಗಲಿದರು.

## ೪. ಸಾಧನೆ—ಸಂಚಾರ

ಅರಳಗುಂಡಿಗೆಯಿಂದ ಮರಳಿದ ಬಳಿಕ ಮಡಿವಾಳಪ್ಪ ತನ್ನ ಬಹುದಿನದ ಬಯಕೆಯಾದ ಲಿಂಗಾನುಸಂಧಾನದಲ್ಲಿ ಮುಳುಗಿದ ಗುರು ಮರುಳಾರಾಧ್ಯರು ತೋರಿದ ಅನುಸಂಧಾನ ಮಾರ್ಗವನ್ನು ಚಾಚೂ ತಪ್ಪದಂತೆ ಅನುಸರಿಸಹತ್ತಿದ.

ಮನಸ್ಸಿನಲ್ಲಿ ಮಾತಿನಲ್ಲಿ ಎಂಥದೋ ಹೊಳಹು ಮೈ ಪಡೆಯ ಹತ್ತಿತು. ಭಾವದಲ್ಲಿ ಬದುಕಿನಲ್ಲಿ ಯಾವುದೋ ಬೆಳಕು ಒಡಮೂಡತೊಡಗಿತು.

ಮೊದಲಿನ ತಳಮಳ ಮಾಯವಾಯಿತು. ಯಾರೊಂದಿಗಾದರೂ ಚರ್ಚೆಗಿಳಿಯುತ್ತಿದ್ದ ಚಪಲ ಕಡಿಮೆಯಾಯಿತು. ತನ್ನೊಳಗೇ ತಾನು ಕುಳಿತು ಅನುಭವಿಸುವದಕ್ಕೆ ಮೊದಲಾಯಿತು. ಬಹಿರ್ಮುಖವಾಗಿ ಹರಿಯುತ್ತಿದ್ದ ಹಂಬಲ ಅಂತರ್ಮುಖವಾಯಿತು.

ಅಲಲಲಲಲೇನಿದು ಅಪೂರ್ವ |
ಮಹ ಮಹಾಂತ ನಿನ್ನ ನಿಜ ನಿಲುವ ||
ನೆಲ ಜಲ ಅನಿಲ ನೀಲಾಕಾಶಾತ್ಮ |
ರವಿ ಶಶಿತಾರೆ ತಾನೆ ಹಲವ || ಪ ||

ಇಲ್ಲದ ನೆನಹಿನ ಬಯಲಾದಾತ್ಮಣು|
ಮಹತ್ತುವು ತಾನೆ ಬಹುರೂಪಾಗಿ ||
ಅಲ್ಲಲ್ಲಿಗೆ ಭ್ರಮೆಗೊಳಿಸುತಲಿರುವದು |
ಸಿಗದಿರು ನೀ ಹಿಡಿದಿರು ಮೇಲಾಗಿ || ೧ ||

ಶರಣ ಸತಿ ಲಿಂಗ ಪತಿಯಾಗಿ ಒಡವೆರೆಯುವಾಗ ಉಂಟಾದ ಇಂಥ ಅನುಭಾವವನ್ನು ಹಾಡಿದಷ್ಟು ಹಾಡ ಬೇಕೆನ್ನಿಸಿತು. ತೋಡಿಕೊಂಡಷ್ಟು ಮತ್ತೆ ತೋಡುವುದುಳಿದಿದೆ ಎಂದು ಕಂಡುಬಂತು.

ಶ್ರೀಗುರು ಕಾರುಣ್ಯದಿಂದ ಲಭಿಸಿದ ಲಿಂಗದ ಬೆಳಗಿನಲ್ಲಿ ಮಡಿವಾಳಪ್ಪ ಮುನ್ನಡೆದ. ತನ್ನಂಗ ಇಂದ್ರಿಯ ಕರಣಂಗಳ ಬಾಗಿಲು ತೆರೆದ. ಅಲ್ಲಲ್ಲಿ ಸ್ವಾಯತವಾಗುವ ಲಿಂಗಗಳನ್ನು ಬರಮಾಡಿಕೊಂಡ. ಮೂಗಿನ ಮಂಟಪದಲ್ಲಿ ಆಚಾರ ಲಿಂಗವನ್ನು ಕಣ್ಣಿನ ಮಂಟಪದಲ್ಲಿ ಶಿವಲಿಂಗವನ್ನು, ಕಿವಿಯ ಮಂಟಪದಲ್ಲಿ ಪ್ರಸಾದ ಲಿಂಗವನ್ನು, ನಾಲಿಗೆ ಮಂಟಪದಲ್ಲಿ ಗುರುಲಿಂಗವನ್ನು ಪ್ರತಿಷ್ಠಾಪಿಸಿದ.

ಆಗ ಆತ ವಾಸಿಸಿದ್ದು-ಕಂಡದ್ದು-ಕೇಳಿದ್ದು-ಸವಿದದ್ದು ಅನಭವಿಸಿದ್ದು ವಿಷಯವಾಗಲಿಲ್ಲ. ಎಲ್ಲವೂ ಶಿವವಾಯಿತು; ಶುಭವಾಯಿತು. ಎಲ್ಲವನ್ನೂ ಲಿಂಗದ ನಾಲಿಗೆಯಾಗಿ, ಲಿಂಗ ಮುಖವಾಗಿ, ಲಿಂಗ ಮೂಗಾಗಿ ಲಿಂಗ ಕರ್ಣವಾಗಿ ಕೊನೆಗೆ ಲಿಂಗವೇ ಆಗಿ ಲಿಂಗವಂತವಾಗಿ ಸ್ವೀಕರಿಸಿತ್ತು. ಮಡಿವಾಳಪ್ಪ ವಿಶ್ವಲಿಂಗವಂತನಾಗಿ ಮಾರ್ಪೊಳೆದ.

ಆದರೇನು? ಅರಳಗುಂಡಿಗೆಯಲ್ಲಿ ಲಿಂಗಧಾರಣೆಯ ಬಗ್ಗೆ ಎದ್ದ ಕೋಲಾಹಲ ಬಿದನೂರಿಗೂ ಚಾಚಿಬಂತು. ಮಲ್ಲಿಕಾರ್ಜುನಪ್ಪಗೌಡನೊಬ್ಬನನ್ನುಳಿದರೆ ಉಳಿದ ಊರವರಾರೂ ಮಡಿವಾಳಪ್ಪನ ದೀಕ್ಷೆಯ ಬಗ್ಗೆ ಸಹಮತವುಳ್ಳವರಾಗಿರಲಿಲ್ಲ.

"ಲಿಂಗ ಕಟ್ಟಿಕೊಂಡ ಮಾತ್ರಕ್ಕೆ ಮಡಿವಾಳಪ್ಪನೇನಾದರೂ ಮಹಾಂತ ಆದಾನೆಯೆ? ಧರ್ಮವನ್ನು ಕುಲಗೆಡಿಸಿದ ಇಂಥ ಪಾಪಿಷ್ಠರ ಸಂಖ್ಯೆ ಹೆಚ್ಚಾಗುತ್ತಿರುವದರಿಂದಲೇ ಅನಿಷ್ಟಗಳು ಮೈದೋರುತ್ತಿವೆ. ಅರಳಗುಂಡಿಗೆಯಲ್ಲಿ ಶರಣ ಬಸವಪ್ಪನನ್ನು ಬಹಿಷ್ಕರಿಸಿರುವಂತೆ, ತಾವೂ ಸಮಾಜದಿಂದ ಮಡಿವಾಳಪ್ಪನನ್ನು ಬಹಿಷ್ಕರಿಸತಕ್ಕದ್ದು" ಎಂದು ಮುಂತಾಗಿ ಹಲವರು ಆಲೋಚಿಸಿದರು.

ಯಾರ್ಯಾರೋ ತಮತಮಗೆ ತಿಳಿದಂತೆ ಆಡಿಕೊಂಡರು. ಆಜನ್ಮ ಬ್ರಹ್ಮಚಾರಿಯಾಗಿದ್ದು ಆಧ್ಯಾತ್ಮಿಕ ಸಾಧನೆಯಲ್ಲಿ ತೊಡಗಬೇಕೆಂದಿದ್ದ ಮಡಿವಾಳಪ್ಪನ ನಿಲುವನರಿಯದೆ ಆತ ಉಟ್ಟಿದ್ದ ಕಾವಿ ಉಡುಗೆ-ಕಟ್ಟಿಕೊಂಡಿದ್ದ ಲಿಂಗಕ್ಕೆ ಅಪಹಾಸ್ಯ ಮಾಡಿ ನಕ್ಕರು. ಬಗೆಬಗೆಯ ಆರೋಪ ಹೊರಿಸಿ ಹೀಗಳೆದರು. ಲಂಗುಲಗಾಮಿಲ್ಲದೆ ಬಾಯಿ ಹರಿಬಿಟ್ಟರು.

ಮಡಿವಾಳಪ್ಪ ಜನರ ಈ ಅಪನಿಂದೆಗಳನ್ನು ಕೇಳಿ ಕನಲಿ ಹೋದನು. ಸುಮ್ಮಸುಮ್ಮನೆ ಮನಸ್ಸು ಬಂದಂತೆ ಇವರೆಲ್ಲ ಹೀಗೆ ಏಕೆ ಆಡುತ್ತಿರಬಹುದು? ಎಂದು ಗಂಭೀರವಾಗಿ

ಆಲೋಚಿಸಿದನು. ಅನ್ಯರನ್ನು ಕಾರಣವಿಲ್ಲದೆ ಆಡಿಕೊಳ್ಳುವ ಈ ವಿಘ್ನ ಸಂತೋಷ ಸ್ವಭಾವಕ್ಕೆ ಏನು ಕಾರಣವಿರಬೇಕು? ಎಂದು ಚಿಂತಿಸಿದನು.

ತನ್ನಿಂದ ಜನರಿಗೆ ಆದ ಅನ್ಯಾಯವಾದರೂ ಏನು? ಅವರಿಗೆ ನಾನೇನು ಮಾಡಿದ್ದೇನೆ? ನನ್ನ ಆತ್ಮಿಕ ಅಭಿಲಾಷೆಯಂತೆ ನಾನು ನಡೆದುಕೊಂಡರೆ ಇವರಿಗೆಲ್ಲ ಆಗಿದ್ದೇನು? ಕಾಮ ಕ್ರೋಧ, ವಿಷಯ, ಹುಸಿ, ಅಹಂಕಾರ ಇವು ಯಾರನ್ನು ಬಿಟ್ಟಿಲ್ಲವೆಂದೂ, ಲಿಂಗ ಕಟ್ಟಿಕೊಂಡ ಮಾತ್ರಕ್ಕೆ ಮಡಿವಾಳನೇನೂ ಮಹಾಂತನಾಗಲಾರನೆಂದೂ ಇದೆಲ್ಲ ಬೂಟಾಟಿಕೆಯ ವ್ಯಾಪಾರವೆಂದೂ–ತನ್ನನ್ನು ಹೀಗಳೆಯುವದಕ್ಕೆ ಯಾವ ಆಧಾರವಿದೆ? ತತ್ವ-ಆಚಾರ ವಿಚಾರಗಳ ಬಗ್ಗೆ ಏನೊಂದೂ ಗೊತ್ತಿಲ್ಲದೆ ಹೀಗೆ ಇವರೆಲ್ಲ ಹಗುರಾಗಿ ಮಾತಾಡುತ್ತಿದ್ದುದು ಏತಕ್ಕಾಗಿ? ನನ್ನಿಂದೇನಾದರೂ ತಪ್ಪು ಘಟಿಸಿರಬೇಕೆ? ಎಂದು ಮುಂತಾಗಿ ಯೋಚಿಸಿದನು.

ಯಾವುದೂ ಹೊಳೆಯಲಿಲ್ಲ. ಮನಸ್ಸು ಹಲವು ಪ್ರಶ್ನೆಗಳ ಗೊಂದಲಪುರವಾಯಿತು. ವಿನಾಕಾರಣ ಬಂದ ಆಪಾದನೆಗಳಿಂದ ಹೃದಯ ಅಳುಕಿತು. ವಿಷಣ್ಣನಾಗಿ ಹಾಡಿದನು.

ನಗಬೇಕ ಏನಳಬೇಕ
ಜಗದ ಜನರು ಮಾಡ್ವ ಹಗರಣವನ ಕಂಡು ||ಪ||
ಆರುವರ್ಗವನಳಿದವರಾರಿಲ್ಲೆಂಬರು
ಆರುವರ್ಗವನಳಿದ ಹಿರಿಯರ ಸೇರರು

ಆರು-ಮೂರು ಮುವ್ವತ್ತಾರೆಂದು ಹೇಳುವರು
ಘೋರ ನರಕದೊಳು ಬಿದ್ದು
ಸಾಯುವರು ॥ ೧ ॥

ಧರ್ಮವ ಚರಿಸಿರಲು ಓಲೈಸರು
ಕರ್ಮವ ಬೆರಿಸಿ ಕೊಂಡವರ ಸೇರುವರು
ನಿರ್ಮಲವಾದ ನಿಜವೊಮ್ಮ ನರಿಯರು
ಮರ್ಮವಿಲ್ಲದ ಮರ್ಮ ಹೊಂದಿಸಿ
ನುಡಿವರು ॥ ೨ ॥

ಒಮ್ಮನದವರ ನಂಬಿಗಿ ಕಂಡರೆ ಸೇರರು
ತಮ್ಮನೇ ನಂಬಲು ತಾವು ಕಡಿಗಿ ಹಾಯ್ವರು
ಗಮ್ಮನೇ ನಮ್ಮ ಮಹಾಂತೇಶನ ಹೊಂದರು
ಚುಮ್ಮ ಸೂಳೆಮುಕ್ಕಳು ಸುಮ್ಮನೆ
ಕೆಡುವರು ॥ ೩ ॥

ಮನಸ್ಸು ಹಗುರಾಯಿತು. ಲೋಕ ನಿಂದೆಯ ಬಗ್ಗೆ ತೀವ್ರ ಉಪೇಕ್ಷೆಯ ಭಾವ ಅವನಲ್ಲಿ ಒಡಮೂಡಿ ಬಂತು.

ಬಿದನೂರನ್ನು ತೊರೆದು ಚಿಣಮಗೇರಿಯ ಬೆಟ್ಟದಲ್ಲಿ ವಾಸಿಸಹತ್ತಿದನು. ಮಲ್ಲಿಕಾರ್ಜುನಪ್ಪಗೌಡರು ನಿತ್ಯವೂ ಅಲ್ಲಿಗೆ ಬಂದು ಹೋಗುತ್ತಿದ್ದರು. ಇಬ್ಬರೂ ಕೂಡಿ ಅನುಭಾವ ನಡೆಸುತ್ತಿದ್ದರು. ಸಂಚಾರಾರ್ಥವಾಗಿ ಹೊರಟು ಬರುತ್ತಿದ್ದ ಸಾಧು ಸಂತರಂತೂ ಅಲ್ಲಿ ಇದ್ದೇ ಇರುತ್ತಿದ್ದರು. ಒಮ್ಮೊಮ್ಮೆ ಅವರೆಲ್ಲ ಕೂಡಿ ಅನೇಕ ಆಧ್ಯಾತ್ಮಿಕ ಸಂಗತಿಗಳನ್ನು ಕುರಿತು ಚರ್ಚೆ ಮಾಡುತ್ತಿದ್ದರು.

ಮಹಾಂತೇಶನ ಗದ್ದುಗೆಗೆ ನಿತ್ಯವೂ ಸುತ್ತುಮುತ್ತಲಿನ ಊರುಗಳಿಂದ ನೈವೇದ್ಯ ಬರುತಿತ್ತು. ಸಾಲದ್ದಕ್ಕೆ ಮಲ್ಲಿಕಾರ್ಜುನಪ್ಪಗೌಡರೂ ಪ್ರಸಾದ ಕಳಿಸುತ್ತಿದ್ದರು. ಹೀಗಾಗಿ ಪರಸ್ಥಳದಿಂದ ಯಾರೇ ಬಂದರೂ ಅಲ್ಲಿ ಪ್ರಸಾದಕ್ಕೆ ಕೊರತೆ ಇರಲಿಲ್ಲ.

ಒಮ್ಮೆ ಮಡಿವಾಳಪ್ಪ ಒಂದು ವರ್ಷ ಪರ್ಯಂತ ತಾನು ಅನುಷ್ಠಾನಕ್ಕೆ ಕುಳಿತುಕೊಳ್ಳಬೇಕೆಂದು ಸಂಕಲ್ಪಿಸಿದ. ಇದನ್ನು ಮಲ್ಲಿಕಾರ್ಜುನಪ್ಪಗೌಡರಿಗೂ ತಿಳಿಸಿದ. ಆಗ ಈತನಿಗೆ ಇಪ್ಪತ್ತೈದರ ತುಂಬ ಹರೆಯ. ಈಷಣತ್ರಯಗಳು ಮಣ್ಮುಕ್ಕಿಸುವ ಸಮಯ ಕಾಮ, ಕ್ರೋಧ, ಮೋಹ, ಮದಗಳೆಲ್ಲ ಕೊಬ್ಬಿದ ಗೂಳಿಗಳಂತೆ ನುಗ್ಗುತ್ತಿದ್ದವು. ವಿಷಯದ ಹಸುರಿಗೆ ಮನಸ್ಸು ಎಳಿಸ್ಯಾಡತೊಡಗಿತ್ತು. ಹದಿನೆಂಟು ಆಕಾಂಕ್ಷೆಗಳು ಹರಿದು ತಿನ್ನಹತ್ತಿದ್ದವು. ಹರಿದಾಡುವ ಚಿತ್ತವನ್ನು ಒಂದೆಡೆ ದೃಢಗೊಳಿಸಿ ವಿಷಯದ ಹಸುರಿನಿಂದ ತಪ್ಪಿಸಿಕೊಳ್ಳಲು ಮಡಿವಾಳಪ್ಪ ಕೊಸರಾಡುತ್ತಿದ್ದ.

ನಾನಿತ್ತಲೆಳೆದರೆ| ತಾನತ್ತಲೆಳೆವುದು| ಇನ್ನೇ
ನಿನ್ನೇನೋ
ಅಜ್ಞಾನ ಎಂಬುವ ಕೋಣ ಸಾಧ್ಯವಾಗದು
ಇನ್ನೇನಿನ್ನೇನೋ
ಹಸಿ ಹುಲ್ಲ ಕಂಡಲ್ಲಿ ಬಿಸಿಲೋಳು ಮೇಯುವದು|
ಸಸಲ ಹೊಡಿದೇತೆಂದು ಕುಶಲ ತಿಳಿಯದ
ಕೋಣ ಇನ್ನೇ||

ಮುಪ್ಪುರಿಗುಡಿಸಿ ಮುಗದಾಣಿ ಹಾಕಿದ್ದೆ|
ಜಪ್ಪಿಸಿ ಹಿಡಿದರೆ ತಪ್ಪಿಸಿ ಹೋದೀತು| ಕೋಣ
||ಇನ್ನೆ||

– ಎಂಬ ತಳಮಳದಿಂದ ಹೊಯ್ದಾಡಿದ.

ಇದನ್ನು ತಡೆದು ನಿಲ್ಲಿಸಿ ಗೆಲ್ಲುವದಕ್ಕೆ ಅನುಷ್ಠಾನ ಗೈವುದೊಂದೇ ಪರಮೋಪಾಯ ಎಂದು ಆತ ಭಾವಿಸಿದನು.

ಮಲ್ಲಿಕಾರ್ಜುನಪ್ಪಗೌಡರು ಅದೇನು ಕಾರಣವೋ ಮೊದಲು ಒಪ್ಪಿಗೆ ಕೊಡಲಿಲ್ಲ. ಒಂದು ದಿನ ಸಾಯಂಕಾಲ ಭಜನೆಗೆಂದು ಕುಳಿತಾಗ ಮಡಿವಾಳಪ್ಪ ಮತ್ತೆ ತನ್ನ ಎದೆಗುದಿಯನ್ನು

ಮಾಯಾಪುರದರಸು ತಾ ಮೇರೆದಪ್ಪಿ ಬರುತಾನ
ಅವಿವೇಕಿ ಕೂಡ ಮಾಡೋ ಲಡಾಯಿ||
ಆಯುವರಿದು ಸಜ್ಜಾಗಿರೊ ಶಿವಮುಂದಿ
ಬತ್ತಲಗುದರಿ ಬಿಚ್ಚಗತ್ತಿ ಬಡಾಯಿ ||ಪ||
ಆಸೆಯು ಸೈನ್ಯಾಧಿಪತಿ| ಕಾಮನೆ ಕಾರಭಾರಿ|
ಕೋಪಾಟೋಪ ಭಾರಿ| ಲೋಭಲುಬ್ಧಕ ವೈರಿ|
ಮೋಹ ಮುಖ್ಯನಾಯಕ| ಮದಮುದಕರಿ|
ಮತ್ಸರ ಪದಾತಿ| ಹುಸಿ ಸರದಾರ ||೧||

ಎಂದು ತೋಡಿಕೊಂಡನು "ಮಾಯಾಪುರದರಸು ತಾ ಮೇರೆದಪ್ಪಿ ಬರುತಾನ" ಎಂಬ ಪಲ್ಲವಿಯನ್ನೇ ಆತ ಪುನಃ ಪುನಃ ಎತ್ತಿಕೊಂಡು ಅಸಹಾಯಧಾಟಿಯಲ್ಲಿ ಹಾಡು ಹೇಳಿ

ದಾಗ ಭಜನಾಮಂಡಳಿಯುವರಿಗೆಲ್ಲ ತಾವು ಅದನ್ನೇ ಅನುಭವಿಸಿದ್ದಂತೆ ಅನಿಸಿತು. ಇದು ಆತನ ಆತ್ಮದ ಕಳವಳವೆಂಬುದೂ ಹೊಳೆಯಿತು. ಆಗ ಮಲ್ಲಿಕಾರ್ಜುನಪ್ಪಗೌಡನೂ ಮಡಿವಾಳಪ್ಪನ ಉತ್ಕಟೇಚ್ಛೆಯನ್ನೂ ಅರಿತುಕೊಂಡ ಮಾರನೆಯ ದಿನವೇ ಅನುಷ್ಠಾನಗೈಯ್ಯಲು ಅನುಮತಿ ನೀಡಿದ.

ಒಂದು ವರ್ಷ ಸಂಪೂರ್ಣ ಮಡಿವಾಳಪ್ಪ ಮಹಾಂತೇಶನ ಗದ್ದುಗೆಯೆದುರು ಆಸನ ಹಾಕಿ ಕುಳಿತುಕೊಂಡು ಅನುಷ್ಠಾನಗೈದ. ಕರಸ್ಥಲದಲ್ಲಿ ಚುಳುಕಾಗಿ ಬಂದ ಇಷ್ಟಲಿಂಗದ ಮೂಲಕ ಜಗದಗಲ, ಮುಗಿಲಗಲ, ಮಿಗೆಯಗಲ–ಪಾತಾಳದಿಂತತ್ತ–ಬ್ರಹ್ಮಾಂಡದಿಂದತ್ತತ್ತ ಅಗಮ್ಯ ಅಪ್ರಮಾಣವಾಗಿ ತುಂಬಿ ತುಳುಕುತ್ತಿರುವ ಪರವಸ್ತುವನ್ನು ಅಂಗವಿಸಿಕೊಳ್ಳುವ ಸಾಧನೆ ಮಾಡಿದ. ಆಗಲೂ ಜನ ಆತನನ್ನು ಗುರುತಿಸಲಿಲ್ಲ. ಆತನನ್ನು ಆತನ ಜಪ ಅನುಷ್ಠಾನಗಳನ್ನು ತೆಗಳಿದರು. ಎಲ್ಲವೂ ಡಾಂಭಿಕವೆಂದು ವಿಡಂಬಿಸಿದರು.

ಯಾರು ಏನೇ ಅನ್ನಲಿ ಮಡಿವಾಳಪ್ಪನಿಗೆ ಮಾತ್ರ ಆ ಅನುಷ್ಠಾನದಿಂದ ಮನಸ್ಸಿಗೆ ತಂಪೆರೆದಂತಾಯಿತು. "ಅಲಲಲಲ ಲೇನಿದು ಅಪೂರ್ವ, ಮಹಮಹಾಂತ ನಿನ್ನ ನಿಜ ನಿಲವ" ಎಂಬ ತನ್ನ ಹಾಡನ್ನೇ ತಾನು ಗುಣುಗುಣುಸಿ ಹೇಳಿಕೊಂಡ. ಅಪರ ಒಡಲೊಳಗೆ ಹುದುಗಿದ್ದ ಅನುಭಾವ ವೈಭವವನ್ನು ಅರ್ಥವಿಸಿಕೊಂಡು ಪುಳಕಿತನಾದ.

ಕೆಲವು ದಿನ ಕಳೆದ ಮೇಲೆ ಶ್ರೀಶೈಲದತ್ತ ಹೋಗಿ ಬರಬೇಕೆಂಬ ಆಸೆಯಾಯಿತು. ಈ ಹಿಂದೆ ಕಲ್ಯಾಣಕ್ಕೆ

ಹೋಗಿದ್ದ 'ಶಿವಯ್ಯ'ನವರೆಂಬ ಜಂಗಮ ಮೂರ್ತಿಗಳು ಮರಳಿ ಮತ್ತೆ ಶ್ರೀಶೈಲದತ್ತ ಹೋಗಿದ್ದಾರೆಂಬುದನ್ನು ಯಾರಿಂದಲೋ ಕೇಳಿ ತಿಳಿದಿದ್ದನು. ಅವರನ್ನು ಕಾಣಬೇಕೆಂಬಾ ಸೆಯೂ ಮನಸ್ಸಿನಲ್ಲಿ ಅಡಗಿತು. ಒಡನೆ ಮಲ್ಲಿಕಾರ್ಜುನಪ್ಪ ಗೌಡರಿಂದ ಬೀಳ್ಕೊಂಡು ಬಿದನೂರಿನಿಂದ ಹೊರಟು ಬಿಟ್ಟನು.

ದಿಗ್ಗಿ ಕೆಂಭಾವಿ-ಸುರಪುರ ಮಾರ್ಗವಾಗಿ ಕಾಲ್ನಡಿಗೆ ಯಿಂದ ಹೊರಟ ಮಡಿವಾಳಪ್ಪ ಶ್ರೀಶೈಲಕ್ಕೆ ಬಂದು ತಲುಪು ವದರೊಳಗಾಗಿ ವರ್ಷವೊಪ್ಪತ್ತು ಕಳೆದುಹೋಯಿತು. ಹಾದಿ ಯಲ್ಲಿ ಬಂದ ಊರುಗಳಲ್ಲಿ ಅಲ್ಲಲ್ಲಿ ಹತ್ತೆಂಟು ದಿನಗಳವರೆಗೆ ತಂಗುತ್ತ ದಣಿವು ನಿವಾರಿಸಿಕೊಳ್ಳುತ್ತ ಆಯಾ ಕಡೆಗಳಲ್ಲೆಲ್ಲ ತನ್ನ ಅನುಭಾವವನ್ನು ಬಿತ್ತುತ್ತ ಸಾಗಿದನು. ಅನುಭಾವ ಹೇಳುವುದೇ ಆತನ ಕಾಯಕವಾಯಿತು.

ಒಂದೊಂದೂರಿನಲ್ಲಿ ಆತನಿಗೆ ಒಂದೊಂದು ಬಗೆಯ ಸ್ವಾಗತ ಕಾದಿರುತ್ತಿತು. ಹಲವು ಊರವರು ಆತನನ್ನು ಪೂಜ್ಯತೆಯಿಂದ ಕಂಡರೆ, ಮತ್ತೆ ಕೆಲವರು ಪರೀಕ್ಷೆಯನ್ನೇ ತೆಗೆದುಕೊಳ್ಳುವರು. ಅಪಹಾಸ್ಯಗೈದು ಜರೆಯುವರು.

ಮಡಿವಾಳಪ್ಪನಿಗೆ ಈ ಸಂಚಾರ ಅನೇಕ ಅನುಭವ ಗಳನ್ನು ತಂದುಕೊಟ್ಟಿತು. ಕೋಪ-ತಾಪ, ಸುಖ-ದುಃಖ, ಮೇಲು-ಕೀಳು, ಬಡತನ-ಸಿರಿತನ, ನ್ಯಾಯ-ಅನ್ಯಾಯ, ಸುಳ್ಳು-ಸತ್ಯ, ಮುಂತಾದವುಗಳ ನಿಜರೂಪ ಕಾಣಿಸಿತು.

ಜನರ ರೀತಿ ನೀತಿ, ಆಚಾರ ವ್ಯವಹಾರ ನಡೆನುಡಿಗಳಲ್ಲಿರುವ ಅಂತರ ತಿಳಿಯಿತು. ಮಾತಿಗೂ ಕೃತಿಗೂ ಸಂಬಂಧವೇ ಇಲ್ಲದ ಬರೀ ಮಾತಿನ ಡೊಂಬರನ್ನೂ ಆಗ ಆತನು ಕಂಡನು. ನಿಂದೆ ವಿಡಂಬನೆಗಳನ್ನೇ ಕಸುಬಾಗಿಟ್ಟುಕೊಂಡ ಮತ್ಸರ ಪ್ರಾಣಿಗಳನ್ನೂ ನೋಡಿದನು. ಎಲ್ಲೆಲ್ಲೂ ಆತನಿಗೆ ಇನ್ನೊಬ್ಬರ ಉತ್ಕರ್ಷವನ್ನು ಕಂಡು ಸಹಿಸದ ಜನರೇ ಕಾಣ ಬಂದರು. ತಾವೂ ಮಾಡದೆ, ಮಾಡುವವರಿಗೂ ಮಾಡಲೀಯದ ವಿಘ್ನ ಸಂತೋಷಿಗಳೇ ಗೋಚರಿಸಿದರು.

ಸಂಚಾರ ಕಾಲದಲ್ಲಿ ಆತನಿಗೆ ಮುಖ್ಯವಾಗಿ ಕಾಣಿಸಿದ ಸಂಗತಿ ಏನಂದರೆ ಧರ್ಮದಿಂದ ಜನ ವಿಮುಖವಾದದ್ದು, ಅನೇಕ ಕಂದಾಚಾರಗಳನ್ನೇ ನಿಜಧರ್ಮವೆಂದು ಭಾವಿಸಿಕೊಂಡದ್ದು. ಮೂಢ ವಿಚಾರ ಅಂಧ ವಿಶ್ವಾಸಗಳನ್ನು ಅನುಸರಿಸಿಕೊಂಡು ಹೋಗುವದರಲ್ಲೇ ಪರಮ ತೃಪ್ತಿಯನ್ನು ಕಾಣುತ್ತಿದ್ದುದು.

ಇಂಥ ಅಜ್ಞಾನಿ ಜನಸಮುದಾಯವನ್ನು ತಮ್ಮ ಅನುಕೂಲಕ್ಕೆ ಬಳಸಿಕೊಳ್ಳುವ ಜನರೂ ಇಲ್ಲದಿರಲಿಲ್ಲ. ಜನರ ಅಜ್ಞಾನಕ್ಕೆ ಆಜ್ಯ ಸುರಿಯುತ್ತ ದಿನಕ್ಕೊಂದು ಮಾಸಕ್ಕೊಂದರಂತೆ ಅಂಥ ಸಂಪ್ರದಾಯಗಳನ್ನು ರೂಢಿಸುತ್ತ ತಮ್ಮ ಬೇಳೆ ಬೇಯಿಸುವ ಎತ್ತುಗಡೆಯಲ್ಲಿ ಅವರೆಲ್ಲ ನಿರತರಾಗುತ್ತಿದ್ದರು. ಜನರಾದರೂ ಅಂಥವರನ್ನೇ ಬಲವಾಗಿ ನೆಚ್ಚಿಕೊಂಡಿರುತ್ತಿದ್ದರು. ಯಾರಾದರೂ ನಿಜ ತತ್ತ್ವವನ್ನು ಹೇಳುವವರು

ಆಚರಿಸುವವರು ಕಂಡುಬಂದರೆ ಅಂಥವರನ್ನೇ ಮೂದಲಿಸು ವರು. ಉತ್ತಮ ಆಚಾರ ವಿಚಾರವುಳ್ಳ ಸಾಧು ಸಂತರನ್ನು ಜಂಗಮ ಮೂರ್ತಿಗಳನ್ನು ಗೌರವದಿಂದ ಕಾಣದೆ ಗಾಂಜಿ ಸೇದುವ, ಸೆರೆ ಕುಡಿಯುವ, ಹಾದರ ಮಾಡುವ, ನಕಲಿ ಸಾಧುಗಳನ್ನೇ ದುರಾಚಾರಿಗಳನ್ನೇ ಹಿಂಡು ಹಿಂಡಾಗಿ ಹಿಂಬಾಲಿ ಸುವರು. ಅವರನ್ನೆ ಸಾಕ್ಷಾತ್ ದೇವರೆಂದು ಬಗೆದು, ಅವರ ಸುತ್ತ ಕುಣಿದು ಕುಡಿದು ಹಾಡುವರು.

ಪುಣ್ಯ ಬರುವದೆಂದು ಯಾತ್ರೆ ಕೈಗೊಳ್ಳುವರು. ತಮ್ಮ ನಡೆ ನುಡಿಗಳೇ ಪುಣ್ಯ ಪಾಪವೆಂಬುದನ್ನರಿಯರು. ಉಣ್ಣುವವರು ಯಾರಾದರು ಬಂದರೆ ಅವರಿಗೆ ಅನ್ನವಿಕ್ಕದೆ ಕಲ್ಲು ಮಣ್ಣು ಮೂರ್ತಿಗಳಿಗೆ ದೇವರೆಂದು ಅಡ್ಡಬೀಳುವರು. ಇದು ಸಲ್ಲದ ನಡೆಯೆಂದು ಯಾರಾದರೂ ಬಲ್ಲಿದರು ಹೇಳಿದ ರಾದರೆ ಅವರನ್ನೇ ಜರಿಯುವರು. ಅವರ ಬಗೆಗೆ ಇಲ್ಲದುದ ನಾಡಿಕೊಂಡು ತಮ್ಮ ಅವಗುಣಗಳನ್ನು ಬಯಲಿಗಿಟ್ಟುಕೊಳ್ಳು ವರು.

ಜನಜೀವನ ಎಷ್ಟೊಂದು ಮಲಿನವಾಗಿದೆಯಲ್ಲ ಎಂದು ಮಡಿವಾಳಪ್ಪ ಬಹುವಾಗಿ ಮರುಗಿದನು. ಇವರಿಗೆ ಇವರ ಭಾಷೆಯಲ್ಲೇ ತತ್ತ್ವ ಹೇಳಬೇಕೆಂದು ಬಯಸಿದನು.

ಯಾವುದೋ ಊರಲ್ಲಿ ವಾಸ್ತವ್ಯ ಹೂಡಿದ್ದನು. ಅಲ್ಲಿಯ ಜನರ ರೀತಿ ನೀತಿಗಳು ತುಂಬಾ ಕೆಡುಕಾಗಿ ಆತನಿಗೆ ಕಾಣ

ಬಂದಿದ್ದವು. ಬಹುದಿನಗಳಿಂದ ಕೊರೆಯುತ್ತಿದ್ದ-ಪೀಡಿಸುತ್ತಿದ್ದ ಅನಿಸಿಕೆಗಳನ್ನು ವ್ಯಕ್ತಪಡಿಸುವದಕ್ಕಾಗಿ ಕಾತುರಗೊಂಡಿದ್ದನು. ಅಷ್ಟರಲ್ಲಿ ಯಾರೋ ಬಂದು ಆತನನ್ನು ಭಜನೆಗೆ ಬರಬೇಕೆಂದು ಆಮಂತ್ರಿಸಿದರು. ಇದೊಳ್ಳೆ ಸಮಯವೆಂದು ಬಗೆದು ಮಡಿವಾಳಪ್ಪ ಭಜನೆಗೆ ಹೋಗಿ ಕುಳಿತು ತನ್ನ ಸರದಿ ಬಂದಾಗ ಈ ಹಾಡು ಹೇಳಿದನು.

ಪುಣ್ಯದಿಚ್ಛೆಗಾಗಿ ಯಾತ್ರಿ ಕೇತ್ರಿ ಮಾಡುವರೋ|
ನದಿಯೊಳು ಮುಣುಗಿ ಮೂಗು ಮುಕಳಿ
ತೊಳಕೊಳ್ಳುವರೋ||
ಅನ್ಯಾಯದ ಮಾತು ಒಂದು ಅರಿಯವೊಲ್ಲರೋ|
ಇಂಥ ಟೊಣ್ಣೆ ಸೂಳೆಮಕ್ಕಳಿಗಿನ್ನ ಯಾರು
ಹೇಳುವರೋ ||೧||

ಕಲ್ಲು ಮಣ್ಣು ದೇವರೆಂದು ಪೂಜೆ ಮಾಡುತಾರೊ
ಬಲ್ಲಿದರ ಕಂಡರೆ ದೂರ ಹಾಯ್ದು ಹೋಗುತಾರೊ
ಇಲ್ಲದುದನಾಡಿಕೊಂಬೋದು ಏನು ಬಡಿವಾರೋ
ಒಳ್ಳೆ ಪದವಿ ಕೊಟ್ರು ಒಲ್ಲೆನೆಂದು ಹೇಳ್ತಾರೋ||೨||

ದೊಡ್ಡ ಕಾಮಧೇನು ಸ್ನೇಹ ಮಾಡಲೊಲ್ಲರೊ
ಕಾಲಿ ಗೊಡ್ಡ ಆಕಳ ಹಿಂಡಿ ಕೈ ಮುರಕೊಳ್ತಾರೊ
ಗುಡ್ಡದ ಮಹಾಂತನ ಗುರ್ತು ಅರಿಯವೊಲ್ಲರೊ
ಇಂಥ ಧಡ್ಡ ಸೂಳೆ ಮಕ್ಕಳಿಗಿನ್ನು
ಯಾರ್ಹೇಳುವರೋ ||೩||

–ಎಂದು ಜನರ ಅಕೃತ್ಯಗಳನ್ನು ವಿಡಂಬಿಸಿದರು.

ಅಲ್ಲಿಂದ ಮತ್ತೆ ಮುಂದಿನೂರಿಗೆ ಪ್ರಯಾಣ ಬೆಳೆಯಿತು ಹಾದಿಯುದ್ದಕ್ಕೂ ಅನುಭಾವ ಮಥನ. ಯಾರಾದರೂ ಹಾದಿಯಲ್ಲಿ ಜೊತೆಗೂಡಿದರೆ, ಅವರು ಯಾರೇ ಇರಲಿ ಅವರೊಂದಿಗೂ ಮೆಲ್ಲಗೆ ಅವೇ ಮಾತುಗಳ ಆರಂಭ.

ಮಡಿವಾಳಪ್ಪನ ವೇಷಭೂಷಣಗಳನ್ನು ಗಮನಕ್ಕೆ ತಂದುಕೊಂಡ ಆಸ್ತಿಕನಾರೇ ಆಗಿರಲಿ, ಒಡನೆಯೇ ಅವರಿಂದ ಪ್ರಭಾವಿತನಾಗಿ ಬಿಡುತ್ತಿದ್ದ. ಮೇಲೆತ್ತರದ ದೃಢ ನಿಲುವು. ಮೂವತ್ತರ ಹರೆಯದ ಬ್ರಹ್ಮಚರ್ಯ ತೇಜ ಮುಖದ ಮೇಲೆ. ಕಪ್ಪು ಬಣ್ಣ, ಕಾವಿ ಉಡುಗೆ, ಹಣೆಯ ಮೇಲೆ ಬೆಳ್ಳಗೆರೆಯಂಥ ಭಸ್ಮ. ಎಂಥ ನಾಸ್ತಿಕನನ್ನೂ ಒಮ್ಮೆ ಹೊರಳುವಂತೆ ಮಾಡುತ್ತಿತ್ತು.

ಒಮ್ಮೆ ಮಡಿವಾಳಪ್ಪ ಯಾವುದೋ ಊರಿನ ಗುಡಿ ಕಟ್ಟೆಯ ಮೇಲೆ ಹೋಗಿ ಕುಳಿತಿದ್ದ ದೂರದಿಂದ ನಡೆದು ಬಂದಿದ್ದರಿಂದ ದಣಿವು ತೀವ್ರವಾಗಿತ್ತು. ಹಾಗೆಯೇ ಅಲ್ಲಿ ಒರಗಿಕೊಂಡ. ಗಾಢ ನಿದ್ರೆ ಆವರಿಸಿತು. ಎಷ್ಟೋ ಹೊತ್ತಿನ ಮೇಲೆ ಎಚ್ಚರಾಗಿ ಕಣ್ಣುತೆರೆದು ನೋಡಿದ. ಆಗಲೇ ಸಾಯಂಕಾಲ ಸಮೀಪಿಸಹತ್ತಿತ್ತು.

ಇನ್ನೇನು ಅಲ್ಲಿಂದೆದ್ದು ಮೆಲ್ಲಗೆ ಹೊರಡುವದರಲ್ಲಿದ್ದ ಅಷ್ಟರಲ್ಲಿ ಆ ಗುಡಿಯ ಪೂಜಾರಿ ಕೈಯಲ್ಲಿ ಪೂಜಾಸಾಮಗ್ರಿ

ಗಳನ್ನು ಹಿಡಿದುಕೊಂಡು ಒದ್ದೆ ಬಟ್ಟೆ ಬರಿಮೈಯಲ್ಲೇ ಜನಿವಾರ ತೀಡಿಕೊಳ್ಳುತ್ತ ಬಾಯಿಯಿಂದ ಏನನ್ನೋ ವಟಗುಟ್ಟಿಕೊಳ್ಳುತ್ತ ಗುಡಿಯತ್ತ ಪೂಜೆಗಾಗಿ ಬರುತ್ತಿರುವದು ಕಾಣಿಸಿತು. ಆತನನ್ನು ನೋಡುತ್ತಲೇ ಮಡಿವಾಳಪ್ಪನಲ್ಲಿ ಕುತೂಹಲ ಮೂಡಿತು. "ವೇಷ ಚೆನ್ನಾಗಿದೆ" ಎಂದುಕೊಳ್ಳುತ್ತ ಹಾಗೆಯೇ ಕುಳಿತುಕೊಂಡನು.

ಹತ್ತಿರಕ್ಕೆ ಬಂದ ಪೂಜಾರಿ ಮಡಿವಾಳಪ್ಪನನ್ನು ಒಮ್ಮೆ ದುರುಗುಟ್ಟಿ ಮೇಲೆ ಕೆಳಗೆ ನೋಡಿದನು. ಮಡಿವಾಳಪ್ಪನಿಗೋ ಆಶ್ಚರ್ಯ! ಮತ್ತಷ್ಟು ಕುತೂಹಲದಿಂದ ಆತನ ಆಡಂಬರದ ಪೂಜಾ ವಸ್ತುಗಳನ್ನು ನೋಡಿದನು. ಮೆದುನಗೆ ಮುಖದಲ್ಲಿ ಮೂಡುವದರಲ್ಲಿತ್ತು. ಕೃದ್ಧನಾದ ಪೂಜಾರಿ ಮುಖ ಗಂಟಿಕ್ಕಿ

'ಅತ್ತ ಎದ್ದೇಳೋs......ಮಡಿಲಿಂದ ಬಂದದ್ದು ಕಾಣ್ಯೋದಿಲ್ಲೋನೋs ....ಎಂಥ......ಸೂಳೆಮಗ್ನ ಪಾs... ಮೈಲೀಗಿ ಮುಡಿಚೆಟ್ಟು...ಒಂದೂ ಗೊತ್ತಿಲ್ಲ...'

ಎಂದು ಸಿಡುಕು ಬೇಸರ ಎರಡೂ ಬೆರೆತ ದನಿಯಲ್ಲಿ ನುಡಿದನು. ಮಡಿವಾಳಪ್ಪನಿಗೆ ಆಗ ಸಿಟ್ಟು ಬರುವ ಬದಲು ಹಾಸ್ಯ ಇಣುಕಿತು. ಅವನಿಗೆ ತತ್ತ್ವ ತಿಳಿಸಬೇಕೆಂದು ಮನಸ್ಸಾಯಿತು.

ಈ ಗದ್ದಲವನ್ನು ಕಂಡು ಆಗಲೇ ಸುತ್ತಮುತ್ತ ಹತ್ತಾರು ಜನರು ನೆರೆದಿದ್ದರು. ಅಲ್ಲೆ ಅಂಗಳದಲ್ಲಿ ಆಡು

ತ್ತಿದ್ದ ಮಕ್ಕಳು ಓಡಿಬಂದು ನಡೆಯುತ್ತಿದ್ದ ಜೋದ್ಯವನ್ನು ನೋಡುತ್ತ ಮುಕುರಿಕೊಂಡು ನಿಂತಿದ್ದರು. ಗುಡಿಯೊಳಕ್ಕೆ ಹೋಗಲು ಪೂಜಾರಿಗೆ ಮಡಿವಾಳಪ್ಪ ಹಾದಿ ಬಿಡಲಿಲ್ಲ. ಕುಳಿತಿದ್ದ ವನು ಎದ್ದು ಅಡ್ಡಗಟ್ಟಿಕೊಂಡು ನಿಂತನು. "ಇವನೆಂಥ ಅಧಿಕ ಪ್ರಸಂಗಿಯಿದ್ದಾನಲ್ಲ! ಎಂದು ಉಳಿದವರೂ ಕುಪಿತ ಗೊಂಡು ಆತನನ್ನು ರಟ್ಟೆ ಹಿಡಿದು ಅತ್ತ ತಳ್ಳಬೇಕೆಂದರು. ಅಷ್ಟರಲ್ಲೇ ಆತನ ಕಂಠದಿಂದ ಹಾಡೊಂದು ಮೂಡಿ ಬಂತು. ಹಾಡಿನ ಲಯ ಅರ್ಥದ ನಿಷ್ಠುರ, ರಾಗದ ಮೋಡಿ ಎಲ್ಲರನ್ನೂ ಪರವಶಗೊಳಿಸಿತು. ಬಿಟ್ಟಗಣ್ಣು ತೆರೆದ ಬಾಯಾಗಿ ನಿಂತು ಕೊಂಡು ಎಲ್ಲರೂ ಆ ಹಾಡನ್ನು ಕೇಳತೊಡಗಿದರು.

ಮುಡಚಟ್ಟಿನೋಳು ಬಂದು ಮುಟ್ಟೀ ತಟ್ಟೀ
ಅಂತೀದಿ|
ಮುಟ್ಟಾದ ಮೂರು ದಿನಕ ಹುಟ್ಟಿಬಂದಿದಿ ನೀನು|
ಮುಡಚೆಟ್ಟು ಎಲ್ಲ್ಯಾದ ಹೇಳಣ್ಣಾ ||ಪ||
ತೊಗಲೊಳು ತೊಗಲ್ಹೊಕ್ಕು ತಗಲಿ ಬಂದವ
ನೀನು|
ತಗಲ ಮಾತಾಡುವದೇನಣ್ಣ||
ಇದರ ಬಗೆ ತಿಳಿಯದೆ ಬಗೆದು ಮಾತಾಡಿದರೆ|
ನಗೆಗೇಡಿ ಆಗುತೀದಿ ಅಣ್ಣ ||೧||
ಎಲುವಿನಾಲಯದೊಳು ಒಳಗ್ಹೊಕ್ಕು ನೀಕುಂತು|
ಓಡ್ಯಾಡಬೇಡ ನೀ ಕೇಳಣ್ಣ||

ಎಲವು ತೊಗಲ ಮಲ ಮೂತ್ರ ಮಾಂಸವು|
ನಿನ್ನಲ್ಲೇ ಕಾಣುತಾದಣ್ಣ ||೨||

ಊರ ನರಕವ ತಿಂದು ಭೋರ‍್ಯಾಡಿ ಹಿಂಡುವ
ಎಮ್ಮಿ|
ಹಾಲಿನ ಸವಿ ನೋಡಣ್ಣ||
ಅದರ ಸ್ವಾದ ಹತ್ತಿ ನೀ ಉಂಡು ಗಂಡಾಗಿ
ಕುಂತೀದಿ|
ಶೀಲ ಎಲ್ಲಿ ಉಳಿಯಿತ್ತೇಳಣ್ಣ ||೩||

ಊರ ಭಾವಿಯ ನೀರು ಯಾರಾದರೂ ತರುವರು|
ನಿಮ್ಮ ನೀರು ಬ್ಯಾರ‍್ಯಾವೇನಣ್ಣ||
ಲಂಡೆನ್ಹಳ್ಳ ಹೋಗಿ ನದಿಯು ಕೂಡಿದ ಮ್ಯಾಲ
ನೈವೇದ್ಯ ಹೇಗಾದವು ಹೇಳಣ್ಣ ||೪||

ಸೂಸಲಾಡುವ ದೇಹವ ಸೋಸಿ ನೀರವ ಮಾಡಿ|
ಮಡಿ ಮಾಡಿಕೊಳ್ಳಬೇಕಣ್ಣ||
ನಮ್ಮ ಧೀರ ಮಹಾಂತೇಶನ ಪಾದವ ಹಿಡಿದರೆ|
ಕಡಿತನ ಮಡಿಯಾಗುವಿಯಣ್ಣ || ||೫||

ಹಾಡು ಮುಗಿಯುವವರೆಗೆ ಎಲ್ಲರೂ ಸ್ಥಬ್ಧರಾಗಿ ನಿಂತು ಕೇಳಿದರು. ಮಡಿವಾಳಪ್ಪ ಹೇಳುವ ತತ್ತ್ವ ಎಲ್ಲರ ಮನಕ್ಕೆ ಮುಟ್ಟಿತು. ಆತನ ಅಗಾಧವಾದ ಪಾಂಡಿತ್ಯ ಶಕ್ತಿಯನ್ನು ಕಂಡು ಎಲ್ಲರೂ ತಲೆದೂಗಿದರು. ತತ್ತ್ವವನ್ನೇ

ಹಾಡಾಗಿಸಿ ಎಲ್ಲರ ಎದೆಗಿಳಿಯುವಂತೆ ಮಾಡಿದ ಆತನ ಅಚ್ಚು ಪ್ರತಿಭೆಯ ಸಾಮಿನ್ಯಕ್ಕೆ ಬೆರಗಾದರು. "ನಿಂತ ನಿಂತಲ್ಲೇ ಕವಿ ಕಟ್ಟಿ ಹಾಡಿದನಲ್ಲ!" ಎಂದು ಆವಾಕ್ಕಾದರು.

ಒಡನೆಯೇ ಅವರಲ್ಲಿದ್ದ ಹಿರಿಯನೊಬ್ಬ ತಿಳಿಯದೆ ತಪ್ಪಾಡಿದ್ದಕ್ಕೆ ಕ್ಷಮಿಸಬೇಕೆಂದು ಬಿನ್ನವಿಸಿದನು. ಆದರೆ ಆ ಗುಡಿಯ ಪೂಜಾರಿ ಇದಾವುದನ್ನು ಗಮನಿಸದವನಂತೆ ಅದ್ಯಾವಾಗಲೋ ಅಲ್ಲಿಂದ ಹಾದಿ ಮಾಡಿಕೊಂಡು ನುಸುಳಿ ಹೋಗಿ ಗುಡಿಯಲ್ಲಿ ಗಂಟೆ ಬಾರಿಸುತ್ತ ಮಂತ್ರ ಹೇಳತೊಡಗಿದ್ದನು.

ಮಡಿವಾಳಪ್ಪನ ಹಿರಿಮೆ ಅರಿವಿಗೆ ಬಂದೊಡನೆ ಅವರೆಲ್ಲ ಆತನನ್ನು ಬಹು ಸಂಭ್ರಮದಿಂದ ಊರೊಳಕ್ಕೆ ಕರೆದುಕೊಂಡು ಹೋದರು. ಉಚಿತ ಗೌರವಾದರಗಳಿಂದ ಸನ್ಮಾನಿಸಿದರು.

ಅಂದಿನ ದಿನ ಇಡೀ ರಾತ್ರಿ ಮಡಿವಾಳಪ್ಪ ಜನರಿಗೆ ಧರ್ಮಬೋಧೆ ಮಾಡಿದನು. ತತ್ತ್ವ ಸೂಕ್ಷ್ಮಗಳನ್ನು ವಿವರಿಸಿದನು. ನಮ್ಮ ನಮ್ಮ ಕಾಯಕ ಮಾಡುತ್ತ ನಾವು ಹೇಗೆ ದಿವ್ಯದತ್ತ ಹೋಗಬಹುದು? ಎಂಬುದನ್ನು ಆಧಾರ ಪೂರ್ವಕ ವಿವರಿಸಿದನು. ಗ್ರಾಮಸ್ಥರೆಲ್ಲ ಆತನ ಸದ್ಬೋಧೆಯಿಂದ ಪುನೀತರಾದರು. "ನಮಗೆಲ್ಲ ಅರಿವಿನ ಕಣ್ಣು ತಂದು ಕೊಟ್ಟಿರಿ" ಎಂದು ಕೃತಕೃತ್ಯತೆಯಿಂದ ವಂದಿಸಿ ಮರುದಿನ ಬೀಳ್ಕೊಟ್ಟರು.

ಅಲ್ಲಿಂದ ಇನ್ನೊಂದೂರಿಗೆ ಮುಂದೆ ಸಾಗಿದ. ಅಲ್ಲಿ ಆತನನ್ನು ಯಾರೂ ಗಮನಿಸಿದಂತೆ ಕಾಣಲಿಲ್ಲ. ಪ್ರತಿಯಾಗಿ ಅಲ್ಲಿ ಆತನಿಗೆ ಕಿರುಕುಳವೇ ಉಂಟಾದಂತೆ ಕಾಣುತ್ತದೆ. ಅದಿಷ್ಟೇ ಆತನ ಕಾವ್ಯಭಾವಕ್ಕೆ ಕುಮ್ಮಕ್ಕು ನೀಡಿತು.

ಸಾಕಾಯಿತು ಈ ಊರವ್ವ| ಪರ ಊರಿಗೆ
ಹೋಗನುಬಾರವ್ವ|
ಕಾಕು ಜನರು ಸೇರ್‍ಯಾರವ್ವ| ಮನವಾಕರಿಸಿತು
ಕಾಯ ಪೂರವ್ವ||

ಎಂದು ಹೇಳಿಕೊಳ್ಳುತ್ತ ಪಯಣ ಬೆಳೆಸಿದನು. ಹೋಗುತ್ತ ಹೋಗುತ್ತ ಆ ಹಾಡು ಆಧ್ಯಾತ್ಮಿಕ ವಲಯದಲ್ಲಿ ವಿಹರಿಸಿತು.

ಆರು ಮಂದಿ ಸರದಾರವ್ವ| ತಂಗಿ ಈ ಊರಾಗೇ
ತೀರಿದರವ್ವ!
ಸಾರಿ ಜವಾನರು ಬರುತಾರವ್ವ| ನಿನ್ನ ಪಾರೆದೊಳಗ
ಕೊಡುತಾರವ್ವ ||೧||

ಬಂಧು ಬಳಗ ಬಳದೋಯ್ತವ್ವ| ನಿನ್ನ ಕೈಯ್ಯಾಗ
ಜೋಳಿಗಿ ಬಂತವ್ವ
ಕೇಳೋ ಧಣಿಯಾರಿಲ್ಲವ್ವ ತಂಗಿ| ಹಾಳಾಯಿತು
ಈ ಊರವ್ವ ||೨||

ಮುಂದಕಿಟ್ಟ ನೀ ಕಾಲವ್ವ ತಂಗಿ| ಹಿಂದಕ
ತಿರುಗಿಡಬ್ಯಾಡವ್ವ|

ಮಹಾಂತ ಗುರು ಕರಿ ಬಂದಾನವ್ವ| ಅಲ್ಲಿ
ಆನಂದಪುರಕ ನಡಿರೆವ್ವ ||೩||

ಒಮ್ಮೊಮ್ಮೆ ತನಗೆ ತಾನೇ ಹಾಡು ಹೇಳಿಕೊಳ್ಳುತ್ತ| ಇನ್ನೊಮ್ಮೆ ಹೆರವರಿಗಾಗಿಯೇ ಹಾಡು ಕಟ್ಟುತ್ತ, ತತ್ತ್ವ ತಿಳಿಸುತ್ತ, ಅನುಭಾವ ಬಿತ್ತುತ್ತ ಅಲ್ಲಲ್ಲಿಯ ಜನಜೀವನವನ್ನು ಶಿವದತ್ತ ಎಳೆಯುತ್ತ ಮಡಿವಾಳಪ್ಪ ಒಂದು ದಿನ ಶ್ರೀಶೈಲ ವನ್ನು ಬಂದು ತಲುಪಿದನು. ಶ್ರೀಶೈಲದ ಭೂಮತೆಯನ್ನು ಕಾಣುತ್ತಲೇ ಆತ ಹಲವು ನಿಶ್ಚಯಗಳನ್ನು ಮಾಡಿಕೊಂಡನು.

ಇನ್ಯಾಕೆ ಇಹದಾಸೆವ್ವ| ತನುಮನಧನದಾಸೆ
ಕಡಿಯವ್ವ|
ಕರಣುಳ್ಳ ದೈವವ ಪಿಡಿಯವ್ವ| ನಾಳಿನ ಹಾದಿ
ಹಸನ ಮಾಡವ್ವ|

ಎಂದು ತನಗೆ ತಾನೇ ಬೋಧಿಸಿಕೊಂಡನು.

ಅಲ್ಲಿ ಹನ್ನೆರಡು ವರ್ಷಗಳ ಪರ್ಯಂತ ದೀರ್ಘ ಸಾಧನೆ ಮಾಡುತ್ತ ಉಳಿದನು. ಮೊದ ಮೊದಲು ಶಿವಯ್ಯನವರನ್ನು ಶೋಧಿಸಬೇಕೆಂಬ, ಕಾಣಬೇಕೆಂಬ ಆಸೆಯೇನೋ ಇತ್ತು. ಆದರೆ ಬರುಬರುತ್ತ ಅದೇನು ಕಾರಣವೋ ಅವರನ್ನು ಹುಡುಕುವ ಗೋಜಿಗೆ ಹೋಗಲಿಲ್ಲ. ಹಲವು ಆಧ್ಯಾತ್ಮಿಕ ಅನುಭವಗಳನ್ನು ಪಡೆದುಕೊಂಡನು. ಅಲ್ಲಿ ಈತನ ಗೋಜಗೆ ಯಾರೂ ಬರಲಿಲ್ಲ. ತಾನಾಯಿತು, ತನ್ನ ಸಾಧನೆಯಾಯಿತು. ನಿಶ್ಚಿಂತವಾಗಿ ನಿರಾಳವಾಗಿ ತನ್ನ ಅನಿಸಿಕೆ ಇದ್ದಂತೆ ಅನು

ಷ್ಠಾನ, ಜಪ, ತಪ, ಶಿವಯೋಗ ಅನುಸಂಧಾನಗಳನ್ನು ಕೈಕೊಂಡನು. ಅಲ್ಲಿ ತನ್ನ ಕಾಯ, ಮನ, ಕರಣಗಳನ್ನು ಪೂರ್ತಿ ಮಡಿಗೊಳಿಸಿ ಶಿವನ ಆಳಾದನು.

ಕಮರಿ ಕೊಳ್ಳ, ಕದಳಿ ಬನಗಳನ್ನೆಲ್ಲ ಸುತ್ತಿದನು. ಅಲ್ಲಲ್ಲಿ ಸ್ಥಾಯಿಯಾಗಿ ಉಳಿದು ಶಿವಯೋಗಾನುಸಂಧಾನ ಗೈದನು. ಆ ಸಾಧನೆಯಿಂದ ಆತ ಲಿಂಗ ಶರಣನಾಗಿ ಮೈದಳೆದನು. ಈ ಲಿಂಗ ಶರಣನಿಗೆ ಮೈತುಂಬ ಲಿಂಗದೆಚ್ಚರ, ನೋಡುವ ನೇತ್ರ, ಕೇಳುವ ಕರ್ಣ, ನೆನೆವ ಮನ, ವಿಚಾರಿಸುವ ಬುದ್ಧಿ ಪ್ರಾಣಿಸುವ ಪ್ರಾಣ, ಭಾವಿಸುವ ಭಾವ, ಎಲ್ಲೆಲ್ಲೂ ಲಿಂಗ ದೇವ, ಆತನಿಗೆ. ಒಳಗೆ ಹೊರಗೆಯೆಂಬ ಭೇದವಿಲ್ಲ. ಈ ದೇವನಿಗೆ 'ಉಣಲಾಗದು' ಎಂಬ ನಿಷೇಧವಿಲ್ಲ. ಉಣಬೇಕು ಎಂಬ ಆಸೆ ಇಲ್ಲ. ಇಂಥ ದೇವನುಂಡು ಕೊಟ್ಟ-ಕೇಳಿಬಿಟ್ಟ, ಕಂಡುಬಿಟ್ಟ, ಶೇಷಪ್ರಸಾದವೆಲ್ಲ ಅಪ್ಯಾಯನವೇ. ಲಿಂಗ ಭೋಗೋಪಭೋಗಿಗೆ ಯಾವ ವಿಧಿ ನಿಷೇಧವಿಲ್ಲ. 'ಲಿಂಗ ಸಂಗ ತತ್ತ್ವದ ಶರಣಂಗೆ ಸರ್ವವಿಧ ಭೋಗ ಸುಖಂ' ಏಕೆಂದರೆ ಎಲ್ಲವೂ ಲಿಂಗದ ಬೆಳಸು. ಲಿಂಗ ನೆಲದಲ್ಲಿ ಪುಟ್ಟಿ ಬೆಳೆದಿದೆ ಅನಿಲ ಆಕಾಶ; ಲಿಂಗ ನೆಲದಲ್ಲಿ ಅಂಕುರಿಸಿ ಪಲ್ಲವಿಸಿದೆ ಪೃಥ್ವಿ, ತೇಜ, ಜಲ; ಅಂದ ಬಳಿಕ ಇನ್ನುಳಿದುದರ ಮಾತೇನು?

ಆರೋಗಣೆ ಗೈಯ್ಯುವ ಭಕ್ತನ 'ನಾನು ನಷ್ಟವಾಗಿ' ಲಿಂಗ ದೃಷ್ಟವಾದರೆ ಸಾಕು ಕರಸ್ಥಲದಲ್ಲಿ ಜುಳುಕಾಗಿರುವ ಇಷ್ಟಲಿಂಗದಲ್ಲೇ ಅಖಂಡ ಬೆಳಕು!

ಮಡಿವಾಳಪ್ಪ ಶ್ರೀಶೈಲವೆಂಬ ಲಿಂಗನಾಡಿಯಲ್ಲಿ ಬೆಳೆದ ಲಿಂಗ ಬೆಳೆಯನ್ನು ಆ ಲಿಂಗಯ್ಯನಿಗೆ ಅರ್ಪಿಸಿ ಆತನ ಪ್ರಸಾದ ವನ್ನೇ ಉಂಡುಟ್ಟು ಹಾಸಿ ಹೊದ್ದು, ಅನುಭಾವಿಸಿ ಲಿಂಗ ಪ್ರಸನ್ನನಾದ.

ಅಲಲ ಲೇನಿದು ಅಪೂರ್ವ
ಮಹ ಮಹಾಂತ ನಿನ್ನ ನಿಜನಿಲವ||
ನೆಲ ಜಲ ಅನಿಲ ನೀಲಾಕಾಶಾತ್ಮ
ರವಿ ಶಶಿ ತಾರೆ ತಾನೆ ಹಲವ||

ಎಂಬ ತನ್ನ ಹಾಡನ್ನೇ ಹಾಡಿಕೊಳ್ಳುತ್ತ ಶ್ರೀಶೈಲವನ್ನೆಲ್ಲ ಸುತ್ತಾಡಿದ. ಅಲ್ಲಿ ಕಂಡುಬಂದ ಪ್ರಕೃತಿ ಚೆಲುವನ್ನೆಲ್ಲ ನಯನ ಮುಖದಿಂದ ಹೀರಿ, ಕೇಳಿಬಂದ ಪಶುಪಕ್ಷಿಗಳ ಕಲರವವನ್ನೆಲ್ಲ ಕರ್ಣಮುಖದಿಂದ ಆಲಿಸಿ, ಕೈಗೆ ಸಿಕ್ಕ ಹಣ್ಣು ಹಂಪಲುಗಳನ್ನೆಲ್ಲ ನಾಲಿಗೆ ಮುಖದಿಂದ ರುಚಿಸಿ ಹರಡಿ ಬಂದ ಹೂಗಂಧ ವಾಸನೆಯನ್ನೆಲ್ಲ ಘ್ರಾಣಮುಖದಿಂದ ಸ್ವೀಕರಿಸಿ, ಒದಗಿಬಂದ ಉಷ್ಣಶೀತಲವನ್ನೆಲ್ಲ ಅಂಗಮುಖವಾಗಿ ಅನುಭವಿಸಿ, ಅಲ್ಲಲ್ಲಿಯ ಲಿಂಗದೇವನಿಗೆ ಎಡೆ ಮಾಡಿ ತಾನು ಮಡಿಯಾದ. ಅನ್ವರ್ಥಕವೆಂಬಂತೆ ಮಡಿಯಾಳೂ ಆದ!

ಒಂದು ಬೆಳಗಿನ ಸಮಯ; ಲಿಂಗನಾಡಾದ ಶ್ರೀಶೈಲದ ಮೇಲೆ ಅದೇ ಆಗ ಸೂರ್ಯ ತನ್ನ ಹೊಂಗಿರಣಗಳನ್ನು ಚೆಲ್ಲಿದ್ದ. ಎಲ್ಲೆಲ್ಲೂ ಹಸಿರು ಮುರಿಯುತ್ತಿದ್ದ ಶ್ರೀಶೈಲ ಆ ಬೆಳಗಿನ ಕಿರಣಗಳಲ್ಲಿ ಅಪೂರ್ವ ಸೌಂದರ್ಯದಿಂದ ಕಂಗೊಳಿಸುತ್ತಿತ್ತು.

ಆಗಲೇ ಮಡಿವಾಳಪ್ಪ ಕೊಳ್ಳದಲ್ಲಿ ಸ್ನಾನ ಮಾಡಿ, ಗುಡ್ಡದ ಹೆಬ್ಬಂಡೆಯೊಂದರ ಮೇಲೆ ಕುಳಿತುಕೊಂಡು ಲಿಂಗಾರ್ಚನೆ ಗೈಯುತ್ತಿದ್ದ. ಅಂಗದ ಕೈಯಲ್ಲಿ ಇಷ್ಟಲಿಂಗ. ಅದರಲ್ಲೇ ನಟ್ಟ ನೋಟ. ನೋಟವನನುಸರಿಸಿ ಮನಭಾವದಲ್ಲೂ ಅವೇ ಮಾಟ. ಕಟೆದ ಮೂರ್ತಿಯಂತೆ ಅದೆಷ್ಟು ಹೊತ್ತು ಹಾಗೆ ಕುಳಿತಿದ್ದನೋ! ಸುತ್ತಲಿನ ಗಿಡ ಮರಗಳ ಕೊರಳಿನಿಂದ ಕೇಳಿ ಬರುತ್ತಿದ್ದ ಹಕ್ಕಿಗಳುಲಿವೇ ಮಂತ್ರವಾಗಿತ್ತು. ಒಯ್ಯನೊಯ್ಯನೆ ಬೀಸಿ ತೀಡುತ್ತಿದ್ದ ವಾಯುವೇ ಧೂಪವೆನಿಸಿತ್ತು. ಇಡೀ ಭೂ-ಮಂಡಲವನ್ನೇ ಬೆಳಗುತ್ತ ಹರಡಿದ್ದ ಸೂರ್ಯಕಾಂತಿಯೇ ದೀಪವಾಗಿತ್ತು. ಅಂಥ ನಿರ್ಭರಾನಂದದಲ್ಲಿ ಮಡಿವಾಳಪ್ಪ ಕರಗಿ ಹೋಗಿದ್ದ!

ಬಹಳ ಹೊತ್ತಿನ ಮೇಲೆ ಎಚ್ಚರಗೊಂಡ ಮಡಿವಾಳಪ್ಪ ಎಡಗೈಯೊಳಗಿದ್ದ ಇಷ್ಟಲಿಂಗವನ್ನೇ ದೃಷ್ಟಿಸುತ್ತ ಅಷ್ಟೊತ್ತು ತನ್ನ ಮನೋಭಾವವನ್ನು ತುಂಬಿ ಪ್ರಕಾಶಿಸಿದ ದಿವ್ಯಾನುಭವವನ್ನು ಅದಕ್ಕೆ ನಿವೇದಿಸಿದನು.

ತನ್ನ ತಾ ತಿಳಿದ ವ್ಯಾಲ| ಇನ್ನೇನಿನ್ನೇನೋ
ತನ್ನಂತೆ ಸರ್ವಜೀವರ ಮನ್ನಿಸಿ ಮೂಕಾದ
ವ್ಯಾಲೆ|
ಇನ್ನೇನಿನ್ನೇನೋ| ಇನ್ನೇನಿನ್ನೇನೋ||
ತಾನೆ ಪೃಥ್ವಿ ಅಪ್ಪು ತೇಜ| ತಾನೆ ವಾಯು
ಆಕಾಶಾತ್ಮ |

ತಾನೆ ಸೂರ್ಯ ಚಂದ್ರ ತಾರೆ। ತಾನೆ ಬ್ರಹ್ಮಾಂಡದ
ವ್ಯಾಲೆ ||೧||

ತಾನೆ ಘ್ರಾಣ ಜಿಹ್ವೆನೇತ್ರ। ತಾನೆ ತ್ವಕ್ಕು
ಶ್ರೋತೃಹೃದಯ।
ತಾನೆ ಕಾಯ ಕರಣ ಹರಣ। ತಾನೆ ಪಿಂಡಾಂಡದ
ವ್ಯಾಲೆ ||೨||

ತಾನೆ ಹೆತ್ತು ಸತ್ತು ಚಿತ್ತು। ತಾನೆ ನಿತ್ಯ ನುತ್ಯ
ಸತ್ಯ।
ತಾನೆ ಅರಿತು ಬೆರೆತು ಮರೆತು। ತಾನೆ ಸರ್ವಾಂಗಾದ
ವ್ಯಾಲೆ ||೩||

ತಾನೆ ಲಕ್ಷಸಾವಿರನೂರು। ತಾನೆ ಹತ್ತೊಂಬ
ತ್ತೆಂಟೇಳು।
ತಾನೆ ಆರೈದು ನಾಲ್ಕು ಮೂರು। ತಾನೆ
ಎರಡೊಂದಾದ ವ್ಯಾಲೆ ||೪||

ತಾನೆ ನೀನು ನೀನೆ ತಾನು। ತಾನೆ ಅಲ್ಲ ತಾನೆ ಇಲ್ಲ।
ತಾನೆ ಮಡಿವಾಳ ತಾನೆ ಮಾಂತ। ಏನೋ
ಏನೊಂದಾದ ವ್ಯಾಲೆ ||೫||

ಉಚ್ಚ ಕಂಠದಿಂದ ಲಿಂಗ ನಿಬ್ಬೆರಿಗಿನಾನಂದದಲ್ಲಿ, ಬೆಳಗಿನ ಪ್ರಶಾಂತ ವಾತಾವರಣದಲ್ಲಿ ಮಡಿವಾಳಪ್ಪ ಹಾಡುತ್ತಿದ್ದಂತೆ ಬೆಟ್ಟವೂ ಪ್ರತಿಧ್ವನಿಗೊಟ್ಟು ತಾನೂ

ತನ್ನ ತಾ ತಿಳಿದ ಮ್ಯಾಲೆ| ಇನ್ನೇನಿನ್ನೇನೊ|
ತನ್ನಂತೆ ಸರ್ವಜೀವರ| ಮನ್ನಿಸಿ ಮೂಕಾದ
ಮ್ಯಾಲೆ|
ಇನ್ನೇನಿನ್ನೇ ನಿನ್ನೇನೊ| ಇನ್ನೇನಿನ್ನೇ ನಿನ್ನೇನೊ||

ಎಂದು ಹಾಡಿತು.

ಶ್ರೀಶೈಲದಲ್ಲಿ ಅಲ್ಲಲ್ಲಿ ಸಾಧು ಜಂಗಮರ ತಂಡಗಳು ತಂಗಿರುತ್ತಿದ್ದವು. ಆದರೆ ಅದೇಕೋ ಮಡಿವಾಳಪ್ಪ ತಾನು ಅಲ್ಲಿ ಹನ್ನೆರಡು ವರ್ಷವಿದ್ದರೂ ಒಂದು ದಿನವೂ ಅವರೊಂದಿಗೆ ಕೂಡಿಕೊಳ್ಳಲಿಲ್ಲ. ಎಲ್ಲರನ್ನು, ಎಲ್ಲವನ್ನು ನಿರೀಕ್ಷಿಸುತ್ತ ತನ್ನೊಳಗೆ ತಾನೇ ಏನನ್ನೋ ಹೇಳಿಕೊಳ್ಳುತ್ತ ಹಿಂಡನಗಲಿದ ಗಜದಂತೆ ಬೆಟ್ಟವನ್ನೆಲ್ಲ ಸಂಚರಿಸಿದನು. ಅಲ್ಲಮಪ್ರಭು ಅಕ್ಕ ಮಹಾದೇವಿಯವರ ಕದಳಿ ಬನವನ್ನು ಹೊಕ್ಕು ನೋಡಿದನು. ತನಗೆ ಸರಿಬಂದ ತಾಣದಲ್ಲಿ ತಿಂಗಳೊಪ್ಪತ್ತು ತಂಗಿದ್ದು ಮತ್ತೆ ಮುಂದಕ್ಕೆ ಸಾಗುತ್ತಿದ್ದನು. ಹಸಿವಾದರೆ ಫಲರಾಜಿಗಳಿದ್ದವು. ತೃಷೆಯಾದೊಡನೆ ಹಳ್ಳಕೊಳ್ಳಗಳ ತಿಳಿ ನೀರಿತ್ತು. ಶಯನಕ್ಕೆ ಅಲ್ಲಲ್ಲಿ ಹಾಸು ಬಂಡೆಗಳಿದ್ದವು. ಚಳಿ, ಮಳೆ, ಗಾಳಿ ಬಿಸಿಲುಗಳ ರಕ್ಷಣೆಗೆ ಗಿಡಮರ ಗುಹೆಗಳಿದ್ದವು. ಆತ್ಮ ಸಂಗಾತಕ್ಕಂತೂ ಲಿಂಗದೇವನಿದ್ದ.

ಬೆಳಗು ಬೈಗು ಒಂದೇ ಸವನೆ ಆತನನ್ನು ಅಗಲದೆ ಅನುಸರಿಸಿದ. ಆತನೊಂದಿಗೇ ಮಾತಾಡಿ ಮುದ್ದಾಡಿ, ವರ್ಷಗಳನ್ನು ಸವೆಯಿಸಿದ. ಹನ್ನೆರಡು ವರ್ಷಗಳು ಹನ್ನೆರಡು ನಿಮಿಷಗಳಂತೆ ಕಳೆದು ಹೋದವು.

## ೫. ಕೋಲಾಹಲ ಕಡಕೋಳ

ಶರಣಬಸವಪ್ಪನಿಗೆ ಇನ್ನೊಮ್ಮೆ ಬರುವೆನೆಂದು ತಾನು ಮಾತು ಕೊಟ್ಟದ್ದು ನೆನಪಾಯಿತು. ಅದರ ಹಿಂದೆಯೇ ತನ್ನ ದೆಸೆಯಿಂದ ಆತನು ಊರಲ್ಲಿ ಅನುಭವಿಸಿದ ವಿರೋಧದ ನೆನಪು ನುಗ್ಗಿ ಮನಸ್ಸು ಅಳುಕಿತು. ಈಗ ಮತ್ತೇನೇನಾಗಿದಿಯೋ? ಅನ್ನಿಸಿ ಒಡನೆ ಆತನನ್ನು ಕಾಣಬೇಕೆಂಬ ತವಕಉಂಟಾಯಿತು.

ತನ್ನ ತಾ ತಿಳಿದ ಮ್ಯಾಲೆ ಇನ್ನೇನಿನ್ನೇ ನೊ|<br>
ತನ್ನಂತೆ ಸರ್ವ ಜೀವರ ಮನ್ನಿಸಿ ಮೂಕಾದ<br>
ಮ್ಯಾಲೆ|<br>
ಇನ್ನೇನಿನ್ನೇನೊ| ಇನ್ನೇನಿನ್ನೆನೊ|

ಎಂಬ ಹಾಡನ್ನೇ ಉಚ್ಚ ಸ್ವರದಲ್ಲಿ ಹಾಡುತ್ತ ಶ್ರೀಶೈಲ ವನ್ನು ತೊರೆದು ಮರಳಿ ತಾನು ಬಂದ ಹಾದಿಗೆ ಇಳಿದನು. ಮಡಿವಾಳಪ್ಪ ಹಾಡಿದ ಆ ಹಾಡಿನ ತರಂಗಗಳನ್ನು ಗಿರಿಯಿಂದ ಗಿರಿಗೆ ಘಟ್ಟದಿಂದ ಘಟ್ಟಕ್ಕೆ ಕಳಿಸುತ್ತ; ಕೊಳ್ಳ-ಸರೋವರ ಹಕ್ಕಿ ಗಿಡಮರಗಳ ಕೊರಳಿಗೆ ಸಾಗಿಸುತ್ತ ಶ್ರೀಶೈಲ ಹಿಂದಕ್ಕೆ ಉಳಿಯಿತು. ಮಡಿವಾಳಪ್ಪ ಅದನ್ನು ನಾಡಿಗೆ ಕೇಳಿಸುತ್ತ

ಮುಂದಕ್ಕೆ ಬಂದನು.

ಮರಳಿ ಬರುವಾಗ ಆತನಿಗೆ ಹೆಚ್ಚು ದಿನ ಹಿಡಿಯಲಿಲ್ಲ. ಹೋಗುವಾಗ ಇದ್ದ ನಿಧಾನ ಬರುವಾಗ ಇರಲಿಲ್ಲ. ಯಾವ ಊರುಗಳಲ್ಲೂ ಹೆಚ್ಚು ದಿನ ಉಳಿಯಲಿಲ್ಲ. ಒಂದೆರಡು ದಿನ ಎಲ್ಲಾದರೂ ಉಳಿದರೆ ಅದೇ ಹೆಚ್ಚಾಯಿತು. ರಾತ್ರಿ ತಂಗಿದೆಡೆಯಲ್ಲೆಲ್ಲ ಅಲ್ಲಲ್ಲಿಯ ಜನರನ್ನು ಕೂಡಿಸಿಕೊಂಡು ಶರಣ ತತ್ತ್ವಗಳನ್ನು ತಿಳಿಸುತ್ತಿದ್ದ. ಹಾಡು ಹೇಳಿ ಮನರಂಜನೆ ಮಾಡುತ್ತಿದ್ದ ಮನರಂಜನೆಯಲ್ಲೇ ಜನರಿಗೆ ಧರ್ಮ, ನೀತಿ, ತತ್ತ್ವಗಳ ತಿಳಿವು ಮಾಡಿಸುತ್ತಿದ್ದ.

ಶ್ರೀಶೈಲಕ್ಕೆ ಹೋಗುತ್ತಿದ್ದಾಗ ಅಲ್ಲಲ್ಲಿ ಅಲ್ಪ ಸ್ವಲ್ಪ ವಿರೋಧ ಕಾಣುತ್ತಿತ್ತು. ಆದರೆ ಬರುವಾಗ ಎಲ್ಲ ಕಡೆಗೂ ಮಡಿವಾಳಪ್ಪನನ್ನು ಜನತೆ ಬಹು ಪೂಜ್ಯತೆಯಿಂದ ಸ್ವಾಗತಿಸಿತು. ಸುರಪುರಕ್ಕೆ ಬಂದಾಗ ಅಲ್ಲಿಯ ದೊರೆಗಳು ಆತನನ್ನು ಸಕಲ ರಾಜವೈಭವದಿಂದ ಬರಮಾಡಿಕೊಂಡರು. ಶರಣರಾದ ನಿಷ್ಠೆಯ ಕಡ್ಲೆಪ್ಪನವರು ಆಗ ಆ ಸಂಸ್ಥಾನದ ಹಿರಿಯ ಪ್ರಧಾನರಾಗಿದ್ದರು.

ಅಲ್ಲಿ ಸಮ್ಮಾನಿತನಾಗಿ ಕೆಂಭಾವಿ ಮಾರ್ಗದಿಂದ ಶಹಾಪುರ ತಾಲೂಕಿನ ದಿಗ್ಗಿ ಸೈದಾಪುರಕ್ಕೆ ಬಂದನು. ಆ ಗ್ರಾಮದ ಸುತ್ತ ಪ್ರಕೃತಿ ಚೆಲುವಾಗಿದ್ದರಿಂದಲೋ ವಾತಾವರಣ ಪ್ರಶಾಂತವಾಗಿದ್ದರಿಂದಲೋ ಮಡಿವಾಳಪ್ಪ ಅಲ್ಲಿ ಬಹಳ ದಿನಗಳವರೆಗೆ ಉಳಿದನು. ಅಲ್ಲಿ ಈಗಲೂ ಅನುಷ್ಠಾನಕ್ಕೆ ಕೂಡುತ್ತಿದ್ದ

ಆತನ ಹೆಸರಿನ ಗವಿಯಿದೆ.

ತಿಂಗಳೊಪ್ಪತ್ತು ಅನುಷ್ಠಾನಗೈದು ಬಳಿಕ ಹತ್ತೆಂಟು ದಿನ ತಂಗಿದ್ದು ದಿಗ್ಗಿ ಸೈದಾಪುರದ ಸುತ್ತಲಿನ ಗ್ರಾಮದ ಜನರಿಗೆ ತತ್ತ್ವದ ತಿಳಿ ಬೆಳಕನ್ನು ನೀಡಿದನು. ಅನೇಕ ಹಾಡುಗಳನ್ನು ರಚಿಸಿದನು. ಆತನ ಹಾಡುಗಳು ಇಲ್ಲಿ ಹೆಚ್ಚು ಪ್ರಚಾರಗೊಂಡವೆಂದು ಕಾಣುತ್ತದೆ. ಏಕೆಂದರೆ ಇಲ್ಲಿ ಆತನ ಹಾಡುಗಳನ್ನು ಹೇಳುವವರು ಈಗಲೂ ಸಿಕ್ಕುತ್ತಾರೆ.

ಇಲ್ಲಿಂದ ನೇರವಾಗಿ ಆರಳಗುಂಡಿಗೆ ನಡೆದ. ಹಾದಿಯಲ್ಲೆಲ್ಲೂ ತಂಗಿದಂತೆ ಕಾಣುವುದಿಲ್ಲ.

ಆ ವೇಳೆಗಾಗಲೇ ಶರಣಬಸವನ ಖ್ಯಾತಿ ಎಲ್ಲೆಡೆಗೂ ಪಸರಿಸಿತ್ತು. ಎಲ್ಲರೂ ಆತನ ದಾಸೋಹವನ್ನು ಕುರಿತು ಹೇಳುವವರೇ. ಆತನ ಕರುಣಾಮಯ ವ್ಯಕ್ತಿತ್ವದ ಹಿರಿಮೆಯನ್ನು ಹೊಗಳುವವರೇ.

ಮಡಿವಾಳಪ್ಪ ಇವರಿಂದ ಚಕಿತನಾದ. ನೆನಪು ಮರುಕೊಳಿಸಿತು. ಇದೇ ಹದಿನೈದು ವರ್ಷದ ಹಿಂದೆ ಶರಣಬಸವನ ಪಾಡು ನಾಯಿ ಪಾಡಾಗಿತ್ತು. ವಿರೋಧಿಗಳ ಅಪಪ್ರಚಾರ ಅವಿವೇಕತನಗಳೇ ಆಗ ಮೇಲುಗೈಯಾಗಿದ್ದವು. ಆಗ ಜನರ ಕಣ್ಣಲ್ಲಿ ಶರಣಬಸವಪ್ಪ ಧರ್ಮದ್ರೋಹಿ ಅವಿಚಾರಿ...ಅಬ್ಬಾ! ಜನವೆ! ಈಗ ಮತ್ತೆ ಆತ ದಾಸೋಹಿ, ಧರ್ಮಿಷ್ಠ ಸುವಿಚಾರಿ

ಮತ್ತೆ ನಾಲ್ಕು ದಿನ ಕಳೆದರೆ ಇನ್ನೇನಾಗುವನೋ?...

–ಎಂದು ತನ್ನಲ್ಲೆ ಹೇಳಿಕೊಂಡ. ವಿಸ್ಮಯದ ನಗೆ ನಕ್ಕ.

ಮಡಿವಾಳಪ್ಪ ಮರಳಿ ಬಂದುದರಿಂದ ಶರಣಬಸವಪ್ಪನಿಗೆ ಆದ ಆನಂದ ಅಷ್ಟಿಷ್ಟಲ್ಲ. ಬಹುದಿನಗಳಿಂದ ಒಳಗೊಳಗೆ ಪೀಡಿಸುತ್ತಿದ್ದ ಒಂಟಿಭಾವನೆ ಆತನ ಗಮನದಿಂದ ಮಾಯ ವಾಯಿತು. ಮಡಿವಾಳಪ್ಪನ ಬರುವಿಕೆ ಆತನ ಮೈ ಮನಸ್ಸು ಗಳಲ್ಲಿ ಎಂಥದೋ ಚೇತನ ಉಕ್ಕಿಸಿತು. ಆತ್ಮಕ್ಕೆ ಹೆಚ್ಚಿನ ಕೆಚ್ಚು ಸೇರಿಸಿತು.

ಹದಿನೈದು ವರ್ಷಗಳ ದೀರ್ಘ ಅವಧಿಯಲ್ಲಿ ಅವರಿಬ್ಬರ ವ್ಯಕ್ತಿತ್ವಗಳು ಒಂದು ಹದಕ್ಕೊ ತಿರುಗಿದ್ದವು. ಮಡಿವಾಳಪ್ಪ ಜಪ-ತಪ–ಆತ್ಮಾನುಸಂಧಾನಗಳಿಂದ, ನಾಡಿನ ಸಂಚಾರದಿಂದ ತನ್ನ ವ್ಯಕ್ತಿತ್ವವನ್ನು ಎತ್ತರಿಸಿಕೊಂಡಿದ್ದರೆ–ಶರಣಬಸವಪ್ಪ ಎಲ್ಲೂ ಹೋಗದೆ ಯಾವ ಜಪ-ತಪ ಅನುಷ್ಠಾನಗಳನ್ನೂ ಅಷ್ಟೊಂದು ಅನುಸರಿಸದೆ ಹಸಿದವರಿಗನ್ನವಿಕ್ಕಿ–ಕಷ್ಟದಲ್ಲಿದ್ದ ವರಿಗೆ ಕರುಣೆಯ ನೆರವು ನೀಡಿ ಬದುಕನ್ನು ಮಾಗಿಸಿ ಕೊಂಡಿದ್ದ. ಸಂಚಾರದ ವಿವಿಧ ಅನುಭವಗಳು ಪ್ರತಿಕ್ರಿಯೆ ಪುರಸ್ಕಾರಗಳು ಮಡಿವಾಳಪ್ಪನನ್ನು ಮಾರ್ಪೊಳಿಸಿದ್ದರೆ– ಸ್ಥಾಯಿತ್ವದ ಆಗು ಹೋಗು–ಸ್ತುತಿನಿಂದೆ, ಕಷ್ಟ ಸುಖಗಳು ಶರಣಬಸವಪ್ಪನನ್ನು ಪಕ್ವಗೊಳಿಸಿದ್ದವು.

ಮಡಿವಾಳಪ್ಪ ಬಂದಂದಿನಿಂದ ಶರಣಬಸವಪ್ಪನ ಮನೆ

ಯಲ್ಲಿ ಅನ್ನ ದಾಸೋಹದ ಜೊತೆ ಜ್ಞಾನ ದಾಸೋಹವೂ ಪ್ರಾರಂಭವಾಯಿತು. ನಿತ್ಯವೂ ಸಾಯಂಕಾಲ ಅಲ್ಲಿ ಅನುಭವ ಗೋಷ್ಠಿ ನಡೆಯುಹತ್ತಿತು. ಮಡಿವಾಳಪ್ಪ ಜ್ಞಾನ ದಾಸೋಹದ ಕಾಯಕ ಕೈಕೊಂಡ.

ದೂರ ದೂರದ ಊರುಗಳಿಂದ ಜನ ಬರಹತ್ತಿದರು. ಪ್ರತಿ ದಿನ ಮಡಿವಾಳಪ್ಪ ಶರಣ ಧರ್ಮದ ಅಪೂರ್ವತೆಯನ್ನು ವಿವರಿಸುತ್ತಿದ್ದನು. ಕಲ್ಯಾಣದಲ್ಲಿ ಬಸವೇಶ್ವರರು ಮಾಡಿದ ಕ್ರಾಂತಿಯ ಒಂದೊಂದು ಪುಟವನ್ನು ಬಿಚ್ಚಿ ತೋರಿಸುತ್ತಿದ್ದನು. ಒಂದು ದಿನ ಬಸವಣ್ಣನವರ ಸರ್ವಸಮತಾ ದೃಷ್ಟಿಯನ್ನು ವಿಶ್ಲೇಷಿಸಿದರೆ, ಇನ್ನೊಂದು ದಿನ ಅವರ ಕಾಯಕ ತತ್ತ್ವವನ್ನು ವಿವೇಚಿಸುವನು. ಮತ್ತೊಂದು ದಿನ ಅವರ ಸುಂದರ ಸಾಮಾಜಿಕ ವ್ಯವಸ್ಥೆಯನ್ನು ಚಿತ್ರಿಸುವನು. ಈ ಎಲ್ಲ ಅಂಶಗಳಿಂದ ವೀರಶೈವ ಧರ್ಮವು ಹೇಗೆ ವಿಶ್ವಧರ್ಮವಾಗಿದೆ? ಎಂಬ ತನ್ನ ಸುಂದರ ಆಲೋಚನೆಗಳನ್ನು ಮಗುದೊಂದು ದಿನ ಮಂಡಿಸುವನು. ಪ್ರವಚನ ಮುಗಿದ ಬಳಿಕ ಅಂದಂದಿನ ವಿಷಯಕ್ಕೆ ಸಂಬಂಧಿಸಿದ ಹಾಡೊಂದನ್ನು ರಚಿಸಿ ಸೊಗಸಾದ ರಾಗಮಾಧುರ್ಯ ತಾಳ ಲಯ ಸಂಯೋಜನೆಗಳಲ್ಲಿ ಹಾಡಿ ತೋರಿಸುವನು.

ಮಡಿವಾಳಪ್ಪ ತನ್ನ ವಸತಿಗಾಗಿ ಊರ ಹೊರಗಿರುವ ಮಲ್ಲಿಕಾರ್ಜುನ ದೇವಾಲಯದ ಹಿಂದಿನ ಪೌಳಿಯನ್ನು ಆರಿಸಿಕೊಂಡನು. ಹಗಲೆಲ್ಲ ಶರಣಬಸವಪ್ಪನೊಂದಿಗೆ ಶಿವಾನು

ಭವ ಸ್ನೇಹ. ಸಾಯಂಕಾಲ ಅದರದೇ ಪ್ರವಚನ. ಇರುಳೆಲ್ಲ ತನ್ನ ವಾಸ್ತವ್ಯವಾದ ಪೌಳಿಯಲ್ಲಿ ಅದೇ ಚಿಂತನ ಮನನ.

ದಿನಗಳ ಮೇಲೆ ದಿನಗಳು ಉರುಳಿದವು. ಶರಣಬಸವಪ್ಪನ ಅನ್ನದಾಸೋಹ ಮಡಿವಾಳಪ್ಪನ ಜ್ಞಾನದಾಸೋಹಗಳು ಯಥಾವಿಧಿಯಾಗಿ ಜರುಗುತ್ತಿದ್ದವು. ಮತ್ತೆ ಅವರ ಮೇಲ್ಮೆ ಅರಳಗುಂಡಿಗೆಯಲ್ಲಿ ಸ್ಥಾಪಿತವಾಗತೊಡಗಿತು. ಸುತ್ತಲಿನ ಹಳ್ಳಿಗಳಿಗೂ ವ್ಯಾಪಿಸಹತ್ತಿತು.

ಆದರೆ ಗಾಯಗೊಂಡ ಹುಲಿಯಂತಾಗಿದ್ದ ಹಳಿಪ್ಯಾಟಿ ಬಸಯ್ಯನಿಗೆ ಇದರಿಂದ ಮತ್ತೆ ಸಂಕಟವಾಗಹತ್ತಿತು. ಗಾಯದ ಮೇಲೆ ಬರೆ ಎಳೆದಂತಾಗಹತ್ತಿತು. ಮಡಿವಾಳಪ್ಪ ಶರಣಬಸವಪ್ಪನವರ ಉತ್ಕರ್ಷ ಹೆಚ್ಚಿದಂತೆಲ್ಲ ಆತನ ಮತ್ಸರದಜ್ವಾಲೆ ಪುಟಗೊಂಡಿತು. ಒಳಗೊಳಗೆ ಉರಿಯೆದ್ದು ಆತನುಹೊಯ್ದಾಡಿದನು.

ಶರಣಬಸವಪ್ಪ ಮತ್ತುಮಡಿವಾಳಪ್ಪನವರಲ್ಲಿ ಏನಾದರೂ ದೋಷ ಹುಡುಕಿ ಆಡಿಕೊಳ್ಳುವ ಹವ್ಯಾಸಕ್ಕಿಳಿದನು. ಅವರ ಪ್ರತಿಮಾತಿಗೂ-ನಡೆತೆಗೂ ಅಪಾರ್ಥ ಕಲ್ಪಿಸಿ ನಿತ್ಯವೂ ಹೀಯ್ಯಾಳಿಸದಿದ್ದರೆ ಅಂದಿನ ದಿನದ ಊಟ ರುಚಿ ಹತ್ತದೇನೋ ಎನ್ನುವಷ್ಟು ಆತನ ಮಾನಸಿಕ ಆರೋಗ್ಯ ಹದಗೆಟ್ಟಿತು. ಅವರು ಏನೇ ಅದಂರೂ ಏನೇ ಮಾಡಿದರೂ ಅದಕ್ಕೆ ಬಸಯ್ಯನ ಪ್ರತಿರೋಧ ಮಾಮೂಲು ಕ್ರಮವಾಯಿತು. ಏತಿ ಅಂದು

ದಕ್ಕೆಲ್ಲ ಪ್ರೀತಿ ಸಿದ್ಧವಾಗುತ್ತಿತ್ತು.

ಇದು ಶರಣಬಸವಪ್ಪ ಮತ್ತು ಮಡಿವಾಳಪ್ಪನವರ ಗಮನಕ್ಕೂ ಬಂತು. ಆದರೂ ಅವರು ಆ ಬಗ್ಗೆ ತಮ್ಮ ಪ್ರತಿಕ್ರಿಯೆಗಳಾವುವನ್ನೂ ವ್ಯಕ್ತಪಡಿಸಲಿಲ್ಲ. "ಉದ್ಧಟತನಕ್ಕೆ ಉಪೇಕ್ಷೆಯೇ ಮದ್ದು" ಎಂದು ಉದಾಶೀನಗೈದರು. 'ಆಡುವವರು ಆಡಿಕೊಂಡಿರಲಿ' ಎಂದು ಅಲಕ್ಷ್ಯ ಮಾಡಿದರು.

ಆದರೆ ಅವರ ಈ ಉದಾಶೀನತೆ ಬಸಯ್ಯನಿಗೆ ಹೆಚ್ಚಿನ ಕುಮ್ಮಕ್ಕು ನೀಡಿತೇನೋ ಅವನು ಊರಲ್ಲಿ ಉಗ್ರವಾದ ಪ್ರತಿರೋಧವನ್ನೇ ಸಜ್ಜು ಮಾಡಿದನು.

ಮಡಿವಾಳಪ್ಪನಿಗೆ ಇದರಿಂದ ರೊಚ್ಚು ಬಂತು. ಆದರೆ ಶರಣಬಸವಪ್ಪನವರ ಸಮಾಧಾನದ ಆಗ್ರಹ ಸ್ವಲ್ಪ ದಿವಸ ಆತನ ಕೋಪವನ್ನು ತಡೆಗಟ್ಟಿತು. ದಿನಕ್ಕೊಂದು ಬಗೆಯಾಗಿ ಬಸಯ್ಯನ ಉಪದ್ವ್ಯಾಪಗಳು ಹೆಚ್ಚಿದ್ದರಿಂದ "ಅವನನ್ನು ತಟಿಗಟ್ಟದಿದ್ದರೆ ತತ್ತ್ವಗಳನ್ನೇ ಕುಲಗೆಡಿಸಿ ಜನರ ಮಾನಸಿಕ ಹದ ತಪ್ಪಿಸಿಯಾನು." ಎಂದು ನಿರ್ಧರಿಸಿದನು. 'ತತ್ತ್ವಗಳಿಗೆ ಸಂಚಕಾರ ಬಂದರೆ ಅದಕ್ಕಾಗಿ ಹೋರಾಡುವುದೇ ಶರಣ ಧರ್ಮ' ಎಂದು ಸನ್ನದ್ಧನಾದನು.

ನಿತ್ಯ ನಡೆಯುತ್ತಿದ್ದ ಅನುಭಾವ ಗೋಷ್ಠಿಯು ತನ್ನ ಪ್ರವಚನದಲ್ಲಿ ಅಂದು ಹಳಿಪ್ಯಾಟಿ ಬಸಯ್ಯನವರ ಚಟುವಟಿಕೆ

ಗಳನ್ನು ಪ್ರಸ್ತಾಪಿಸಿ-ಅವನ ವಿಚಾರಗಳನ್ನು ಕಟುವಾಗಿ ಟೀಕಿದನು. ಹೀಗೆ ವಾಚಾಮಗೋಚರವಾಗಿ ಹೀಗಳಿದು ನುಡಿದುದಲ್ಲದೆ ಅವನ ಹೆಸರನ್ನೇ ಉದ್ಧರಿಸುತ್ತ-

ಅಯ್ತನದ ಹಮ್ಮೇನೋ ಚುಮ್ಮಾ| ದೇಹ|
ಮೈಥುನದಿಂದ ಆದಿ ತಾಯಿ ತಂದಿ ಸೊಮ್ಮ ||ಪ||
ಎಲವು ತೊಗಲಿನ ನರಸುತ್ತಿ| ಅದು|
ಹೊಲದು ಮಾಡ್ಯಾದ ಮಲಮೂತ್ರದ ಶತ್ತಿ||
ಚೆಲೋ ಯಾವುದಿದೆ ಹೇಳೋ ಯುಕ್ತಿ| ನಿನ್ನ|
ಹೊಲಸು ಮುಚ್ಚಿಕೊಳ್ಳೋ ಛೀಮೂಳ ಕತ್ತಿ ||೧||

ಅವ ಇವ ಅಂತ್ಯಾಕೊ ದುಡುಕಿ| ನಿನ್ನ|
ನವ ಮಾಸ ತುಂಬಿ ಹೆತ್ತವಳೆ ಕುಂಡಿಹಡಕಿ||
ಭವದೊಳು ಬರುವುದೆಬ್ಬಡಕಿ| ಅನು|
ಭಾವದ ನೆಲಿ ತಿಳಿ ನಿನ್ನ ನೀ ಹುಡುಕಿ ||೨||

ಎಂಬ ಹಾಡೊಂದನ್ನು ಹೊಸೆದು ವಿಡಂಬಿಸಿದನು. ಈ ಹಾಡು ಹೇಳುವಾಗ ಆತನ ಕಣ್ಣುಗಳು ಕೆಂಡವನ್ನುಗುಳುತ್ತಿದ್ದವು. ಧ್ವನಿಯಲ್ಲಿ ರೋಷ ಉಕ್ಕುತ್ತಿತ್ತು. ತುಟಿಗಳು ಕಂಪಿಸುತ್ತಿದ್ದವು.

ಇದನ್ನು ಕೇಳಿ ಹಳಿಪ್ಯಾಟಿ ಬಸಯ್ಯನ ಪಿತ್ಥ ನೆತ್ತಿಗೇರಿತು. ಕುದಿವ ಬಾಣಲೆಯಾದನು. "ತನ್ನನ್ನು ಉದ್ದೇಶಿಸಿ ಮಡಿವಾಳಪ್ಪ ಹಾಡಿದ್ದು ಸಣ್ಣ ಅಪಮಾನವಲ್ಲ. ಪರ ಊರ

ವನೊಬ್ಬ ಬಂದು ಸನಾತನ ಧರ್ಮ ಕೆಡಿಸಿದ್ದಲ್ಲದೆ, ಮನಸ್ಸಿಗೆ ಬಂದಂತೆ ಆಡುತ್ತಾನೆಂದರೆ ಅದಕ್ಕೆ ಶರಣಬಸವಪ್ಪನ ಕುಮ್ಮಕ್ಕೇ ಕಾರಣ ಎಂದು ಗ್ರಹಿಸಿಕೊಂಡನು.

ಮೂರನೆಯ ದಿನವೇ ಆತನ ಮಠದಲ್ಲಿ ಒಂದು ಗುಪ್ತ ಸಭೆ ಸೇರಿತು. ಅವರೆಲ್ಲರೆದುರು ಶರಣಬಸವಪ್ಪನ ಧರ್ಮ ವಿರೋಧಿ ನೀತಿಯನ್ನು ಮಂಡಿಸಿ ಅದರ ಬಗ್ಗೆ ತನ್ನ ತೀವ್ರ ಪ್ರತಿಭಟನೆಗಳನ್ನು ವ್ಯಕ್ತಪಡಿಸಿದನು. ಇವರನ್ನು ಹೀಗೆಯೇ ಸಡಿಲು ಬಿಟ್ಟರೆ ನಾಳೆ ಕುರುಬ, ಗೊಲ್ಲ, ಹೊಲೆಯ, ಮಾದಿಗ ರೆಲ್ಲರಿಗೂ ಲಿಂಗ ಕಟ್ಟುತ್ತಾರೆ. ಸನಾತನ ಧರ್ಮದ ಪಾವಿತ್ರ್ಯ ವನ್ನು ಹಾಳು ಮಾಡುತ್ತಾರೆ. ಈಗ ನಾವೆಲ್ಲ ಒಟ್ಟಾಗಿ ಧರ್ಮ ರಕ್ಷಿಸಬೇಕು. ಎಂದು ತನ್ನ ದುರ್ವಿಚಾರಗಳನ್ನು ಎಲ್ಲರ ತಲೆಯಲ್ಲಿ ಬಿತ್ತಿದನು.

ಆತನ ಈ ಪ್ರಯತ್ನ ಸಫಲಗೊಂಡ ಸೂಚನೆಗಳೂ ಆ ಸಭೆಯಲ್ಲಿ ಕಂಡು ಬಂದುವು. ಅದರಲ್ಲಿ ಯಾರೋ ಒಬ್ಬ ಶರಣಬಸವಪ್ಪನೇ ಇದಕ್ಕೆಲ್ಲ ಕಾರಣವೆಂದೂ ಆತನ ನಯವಿನಯ–ಪೂಜೆ ಆಚಾರ–ವಿಚಾರಗಳೆಲ್ಲ ಡಾಂಭಿಕವೂ ದುರುದ್ದೇಶಪೂರಿತವೂ ಆಗಿವೆಯೆಂದೂ ಆದ್ದರಿಂದ ಆತನ ಚೆಂಡಿಕೆ ಹಾರಿಸಿ ಬಿಡಬೇಕೆಂದು ಸಲಹೆ ಮಾಡಿದನು. ಬಸಯ್ಯ ನಿಗೆ ಈ ಸಲಹೆ ಅತ್ಯುತ್ತಮವಾಗಿ ಕಂಡು ಬಂತು. ಒಡನೆ ಅದನ್ನು ಅನುಮೋದಿಸಿ "ಧರ್ಮವನ್ನು ಹದಗೆಡಿಸಿರುವ ಅವರ ಪಾವಿತ್ರ್ಯವನ್ನು ಹಾಳುಮಾಡಿರುವ ದುಷ್ಟರಿಗೆ ಇದೇ ಸರಿ-

ಯಾದ ಶಾಸ್ತಿ" ಎಂದು ತನ್ನ ನಿರ್ಣಯವನ್ನು ಸಾರಿದನು. ಈ ಮಾತುಗಳನ್ನು ಅಂದಿನ ಸಭೆಗೆ ಬಂದಿದ್ದ ಎಲ್ಲರೂ ಅನು ಮೋದಿಸಿದರು. "ಮಡಿವಾಳಪ್ಪನನ್ನು ಯಾವುದೋ ನೆಪ ಮಾಡಿ ಅವಮಾನಗೊಳಿಸಿ ಇಲ್ಲಿಂದ ಕಾಲುಕಿತ್ತಿಸಬೇಕು. ಶರಣಬಸವಪ್ಪನ ಚೆಂಡಿಕೆ ಹಾರಿಸಬೇಕು" ಎಂದು ಆ ಸಭೆ ಕೊನೆಯಲ್ಲಿ ನಿಶ್ಚಯ ಮಾಡಿತು. ಇದೆಲ್ಲವನ್ನು ಸುವ್ಯವ ಸ್ಥಿತವಾಗಿ ಕೈಕೊಳ್ಳುವ ಹೊಣೆಯನ್ನು ಬಸಯ್ಯ ತಾನೇ ಹೊತ್ತುಕೊಂಡನು. ಉಳಿದವರು ಅದಕ್ಕೆ ತಮ್ಮ ಬೆಂಬಲ ವನ್ನು ಸೂಚಿಸಿದರು.

ಗುಪ್ತಸಭೆಯಲ್ಲಿ ನಿರ್ಣಯಿಸಿದಂತೆ ಬಸಯ್ಯ ತನ್ನ ಏನೆಲ್ಲ ಹುನ್ನಾರಗಳನ್ನು ಒಂದೆರಡು ದಿನಗಳಲ್ಲಿ ಸಜ್ಜು ಮಾಡಿ ಕೊಂಡನು. ಊರ ಪೋಲೀಸಗೌಡರೊಬ್ಬರು ತನ್ನ ಕಡೆ ಹೊರಳಿದರೆ ಉಳಿದೆಲ್ಲ ಕೆಲಸಗಳು ಸರಳಗೊಳ್ಳುವವೆಂದು ಭಾವಿಸಿ ಅವರ ಮನವೊಲಿಸಿ ನೋಡಿದನು. ಆದರೆ ಅದಕ್ಕವರು ತೀವ್ರ ಒಡಂಬಡಲಿಲ್ಲ.

ಬಸಯ್ಯ ಆಲೋಚನೆಗಳಲ್ಲಿ ಮುಳುಗಿದನು. ಹೇಗಾ ದರೆ ತನ್ನಕಾರ್ಯ ಬೆಣ್ಣೆಯಲ್ಲಿ ಕೂದಲು ತೆಗೆದಂತೆ ಆಗು ತ್ತದೆ? ಎಂದು ಯೋಚಿಸಿದನು. ಯಾವುದೂ ಹೊಳೆಯ ಲಿಲ್ಲ. ಗೌಡರನ್ನು ತಮ್ಮ ಕಡೆಗೆ ಒಡಂಬಡಿಸಿಕೊಳ್ಳು ವುದೇ ಒಂದು ಸಮಸ್ಯೆಯಾಯಿತು.

ಒಂದುದಿನ ಬಯಲುಕಡೆಗೆ ಹೋಗಿಮರಳುತ್ತಿದ್ದಾಗ, ಮಲ್ಲಿಕಾರ್ಜುನ ದೇವಾಲಯದ ಹಿಂಬದಿಗಿದ್ದ ಪೌಳಿಯೊಳಗಿಂದ ಅದೇ ಗೌಡರ ತಂಗಿ ಹೊರಬರುತ್ತಿರುವುದು ಕಾಣಿಸಿತು. ಮಡಿವಾಳಪ್ಪನಿದ್ದುದೂ ಅದೇ ಪೌಳಿಯಲ್ಲಿ ಎಂಬುದು ಗೊತ್ತಿತ್ತು. ಗೌಡರ ತಂಗಿ ಭಾಗಮ್ಮನಿಗೆ ಮಹಾರೋಗ ತಗುಲಿದ್ದರಿಂದ ಆಕೆಯನ್ನು ಊರ ಹೊರಗೆ ದೇವಾಲಯದ ಆಚೆ ಒಂದು ಚಿಕ್ಕ ಹುಲ್ಲಿನ ಗುಡಿಸಲು ಹಾಕಿ ಇಟ್ಟಿದ್ದರು. ಹಗಲು ರಾತ್ರಿ ಆಕೆ ಅದೇ ಗುಡಿಸಲಿನಲ್ಲಿ ಇರುತ್ತಿದ್ದಳು.

ಆದರೆ... ಆಕೆ ಮಡಿವಾಳಪ್ಪನಿರುತ್ತಿದ್ದ ಪೌಳಿಯೊಳಗಿಂದ ಬಂದುದನ್ನು ಕಂಡ ಬಸಯ್ಯನ ದುಷ್ಟ ಆಲೋಚನೆಗಳಿಗೆ ಗರಿಮೂಡಿದವು. ಒಂದು ಕಲ್ಲಿಗೆ ಎರಡು ಹಕ್ಕಿಗಳನ್ನು ಹೊಡೆದಂತಾಗುವುದೆಂದು ಸಂತೋಷಿಸಿದನು.

ಒಡನೆ ಮಲ್ಲಪ್ಪಗೌಡನನ್ನು ಕಂಡು ತಾನು ನೋಡಿದ ಘಟನೆಗೆ ಉಪ್ಪು ಖಾರ ಹಚ್ಚಿ ವಿವರಿಸಿದನು. "ಬೇಕಿದ್ದರೆ ಭಾಗಮ್ಮ ಮಡಿವಾಳಪ್ಪನಲ್ಲಿಗೆ ಹೋಗಿ ಬರುವುದನ್ನು ಗೌಪ್ಯವಾಗಿ ಪರೀಕ್ಷಿಸಬಹುದು" ಎಂದು ತಿಳಿಸಿದನು. ಅಂದಂತೆ ಮಲ್ಲಪ್ಪಗೌಡನೇ ಆಕೆಗೆ ಗೊತ್ತಾಗದಂತೆ ಅವಿತುಕೊಂಡಿದ್ದು ಪರೀಕ್ಷಿಸಿದಾಗ ಬಸಯ್ಯನವರು ತಿಳಿಸಿದ ಸಂಗತಿಯೇ ಸತ್ಯವಾಯಿತು. ರಾತ್ರಿ ಹೊತ್ತಿನಲ್ಲಿ ಭಾಗಮ್ಮ ಮಡಿವಾಳಪ್ಪನಲ್ಲಿಗೆ ಹೋಗಿ ಸ್ವಲ್ಪ ಹೊತ್ತಿನಲ್ಲೇ ಹಿಂದಿರುಗಿ ಮತ್ತೆ ತನ್ನ

ಗುಡಸಲಿಗೆ ಹೋಗಿ ಮಲಗಿಕೊಂಡದ್ದನ್ನು ತಾನೇ ಸ್ವತಃ ಕಣ್ಣಾರೆಕಂಡನು.

ಮಲ್ಲಪ್ಪಗೌಡ ಕನಲಿ ಕೆಂಡವಾದನು. ಒಂದೆರಡು ದಿನದಲ್ಲೇ ಮಡಿವಾಳಪ್ಪನನ್ನು ಕೊಲ್ಲಿಸಿ-ನಾಪತ್ತೆ ಮಾಡಬೇಕೆಂದು ಯೋಚಿಸುತ್ತ ಮನೆಗೆ ಮರಳಿ ಮಲಗಿದನು. ಆದರೆ... ಕಣ್ಣು ಹತ್ತಲಿಲ್ಲ, ನಿದ್ದೆ ಬರಲಿಲ್ಲ.

ಭಾಗಮ್ಮ ಮಡಿವಾಳಪ್ಪನವರ ಅನೈತಿಕ ಸಂಬಂಧದ ಸುದ್ದಿ ಅದು ಹೇಗೋ ಕರ್ಣಾಕರ್ಣಿಯಾಗಿ ಊರುತುಂಬ ಹಬ್ಬಿತು. ಊರಲ್ಲಿ ಎಲ್ಲಿ ನೋಡಿದರೂ ಅದೇ ಗುಸು ಗುಸು ಮಾತುಗಳು ತುಂಬಿಕೊಂಡವು. ಅನ್ಯರ ಸಂಗತಿಗಳನ್ನೇ ಆಡಿಕೊಂಡು ಹೊತ್ತುಗಳೆಯುತ್ತಿದ್ದ ಹರಟೆ ಮಲ್ಲರಿಗಂತೂ ಈ ಸುದ್ದಿ ಸುಗ್ರಾಸ ಭೋಜನವಾಗಿತ್ತು.

ಹೀಗೆ ಭಾಗಮ್ಮ ಮಡಿವಾಳಪ್ಪನವರ ಸುತ್ತ ಹಬ್ಬಿದ ಕಥೆ ಚರ್ಚೆಗೊಳ್ಳತೊಡಗಿತು. ಕೆಲವರು ಸಮರ್ಥಿಸಿದರೆ ಕೆಲವರು ಮಾತ್ರ ಅಲ್ಲಗಳೆಯುತ್ತಿದ್ದರು. ಅವರನ್ನು ಉಳಿದವರೆಲ್ಲ ಒಟ್ಟುಗೂಡಿ ತಲೆಬಡಿದು ತಮ್ಮದೇ ಅಭಿಪ್ರಾಯಗಳನ್ನು ಬಲವಂತವಾಗಿ ಹೇರುತ್ತಿದ್ದರು.

ಭಾಗಮ್ಮನ ಕಿವಿಗೂ ಈ ಸಂಗತಿ ಕೇಳಿಬಂತು. ಆಕೆಯ ಬಾಲ್ಯದ ಗೆಳತಿಯೋರ್ವಳು ಬಟ್ಟೆ ಒಗೆಯುವ ನೆಪ ಮಾಡಿಕೊಂಡು ಬಂದು ಎಲ್ಲ ಸಂಗತಿಯನ್ನು ಸವಿಸ್ತಾರವಾಗಿ

ಹೇಳಿದಳು. ಇದಕ್ಕೆ ಪ್ರತಿಕಾರವಾಗಿ ಮಲ್ಲಪ್ಪಗೌಡ ಇಂದಿನ ರಾತ್ರಿಯೇ ಮಡಿವಾಳಪ್ಪನವರ ಕೊಲೆ ಮಾಡಿಸಲು ಸಂಕಲ್ಪಿಸಿದ್ದಾನೆಂದೂ-ಆದ್ದರಿಂದ ಮಡಿವಾಳಪ್ಪನನ್ನು ಇಲ್ಲಿಂದ ಎಲ್ಲಿಗಾದರೂ ಹೊರಟು ಹೋಗಲು ತಿಳಿಸಬೇಕೆಂದೂ ಕಳವಳಿಸಿದಳು.

ಭಾಗವ್ವ ಈ ಸುದ್ದಿಯನ್ನು ಕೇಳಿ ಕ್ಷಣಹೊತ್ತು ತನ್ನ ಕಿವಿಗಳನ್ನೇ ನಂಬದಾದಳು. ತಮ್ಮಿಬ್ಬರ ಸಂಬಂಧವಾಗಿ ಹುಟ್ಟಿದ ಅಶ್ಲೀಲ-ಅನೈತಿಕ ಕಲ್ಪನೆಯನ್ನು ನೆನದು ಗದ್ಗದಿತಳಾದಳು. ತನ್ನ ರೋಗ ನಿವಾರಣೆಗೋಸುಗ ಯಾರಿಗೂ ಗೊತ್ತಾಗದಂತೆ ಮಡಿವಾಳಪ್ಪನಿಂದ ಔಷಧ ತೆಗೆದು ಕೊಂಡು ಬರುತ್ತಿದ್ದುದೇನೋ ನಿಜ! ಆದರೆ ಇದಕ್ಕೆ ಇಂಥ ರೂಪ ಬಂದೀತೆಂದು ಆಕೆ ಕನಸು ಮನಸಿನಲ್ಲೂ ಎಣಿಸಿರಲಿಲ್ಲ ಸಲ್ಲದ ರೀತಿಯಲ್ಲಿ ಇಲ್ಲದ ಕಥೆ ಹುಟ್ಟಿಸಿದವನ ಶಿರ, ಹೊಟ್ಟೆ ಒಡೆದುಹೋಗಲಿ ಎಂದು ನೂರು ಬಾರಿ ಶಪಿಸಿದಳು. ತಾನೊಂದು ಬಗೆದರೆ ದೈವ ಇನ್ನೊಂದು ಬಗೆಯಿತಲ್ಲ ಎಂದು ಕಣ್ಣೀರಿಟ್ಟಳು. ಹಳಿಪ್ಯಾಟಿ ಬಸಯ್ಯನೇ ಇದಕ್ಕೆಲ್ಲ ಕಾರಣನೆಂಬುದನ್ನು ಕಂಡುಹಿಡಿಯಲು ಆಕೆಗೇನೂ ಬಹಳ ಸಮಯ ಹಿಡಿಯಲಿಲ್ಲ. ಅಲ್ಲದೆ ಆ ಗೆಳತಿ ಎರಡು ಮೂರುದಿನಗಳ ಹಿಂದೆ ಬಸಯ್ಯನ ಮನೆಯಲ್ಲಿ ನಡಿಯಿತೆನ್ನಲಾದ ಗುಪ್ತ ಸಭೆಯ ವಿವರಗಳನ್ನು ಹೇಳಿದಾಗಲಂತೂ ಅದು ಮತ್ತಷ್ಟು ದೃಢವಾಯಿತು.

ಇನ್ನು ತಡಮಾಡಿದರೆ ನಡೆಯಬಾರದ್ದು ನಡೆದು ಹೋದೀತೆಂದು ಒಡನೆ ಆಕೆ ಮಡಿವಾಳಪ್ಪನವರ ಹತ್ತಿರ

ಬಂದಳು. ಮಡಿವಾಳಪ್ಪನಿಗೆ ಯಾವ ಸಂಗತಿಯೂ ಗೊತ್ತಾಗಿರಲಿಲ್ಲ. ಎಂದಿನಂತೆ ಸಾಯಂಕಾಲದ ತನ್ನ ಪ್ರವಚನ ಕಾರ್ಯವನ್ನು ಮುಗಿಸಿಕೊಂಡು ಬಂದು ಅದೇ ಆಗ ಹಾಸಿಗೆಯ ಮೇಲೆ ಉರುಳಿದ್ದನು. ಹೆಜ್ಜೆ ಸಪ್ಪಳವಾಗುತ್ತಲೆ ಮಲಗಿದಲ್ಲಿಂದ 'ಯಾರವರು?' ಎಂದು ಕೇಳಿದ್ದಕ್ಕೆ ಭಾಗಮ್ಮ "ನಾನು ತಂದೆ!" ಎಂದು ಆತನ ಹಾಸಿಗೆ ಹತ್ತಿರಕ್ಕೆ ಹೋಗಿ ಪಾದಗಳನ್ನು ಗಟ್ಟಿಯಾಗಿ ಹಿಡಿದುಕೊಂಡು ಅಳತೊಡಗಿದಳು. ಅದಕ್ಕೆ ಕಾರಣವೇನೆಂದು ವಿಚಾರಿಸಿದರೆ ಆಕೆ ಬಹಳ ಹೊತ್ತಿನ ಮೇಲೆ ಎಲ್ಲವನ್ನು ವಿವರಿಸಿ ಬಿಕ್ಕಳಿಸತೊಡಗಿದಳು.

ತನ್ನನ್ನು ಕೊಲೆಮಾಡುವ ಹೊಂಚು ನಡೆದಿದ್ದು ತಾನು ಅಲ್ಲಿಂದ ಹೊರಟು ಹೋಗಬೇಕೆಂಬುದನ್ನು ಆಕೆಯ ಬಾಯಿಂದ ಕೇಳಿ- "ಛೀ!... ಎಂಥ ಹುಚ್ಚಿಯಮ್ಮ ನೀನು! ಅಂಜಿ ಓಡುವುದು ಶರಣಧರ್ಮವಲ್ಲ. ಬಂದುದನ್ನು ಎದುರಿಸಿ ಈಡಾಡಿ, ಹೋರಾಡುತ್ತ ಬದುಕುವುದೇ ಶರಣರ ಗುರಿ... ಜೀವಕ್ಕಂಜಿ ಓಡಿ ಹೋಗುವ ಜೀವಗಳ್ಳರಲ್ಲ... ಶರಣರು ಜಾತಸ್ಯ ಮರಣಂ ಧ್ರುವಂ. ಏನಾಗುತ್ತದೋ ಒಮ್ಮೆ ಆಗಿ ಹೋಗಲಿ." ಎಂದು ಧೃಡ ಸ್ವರದಲ್ಲಿ ನುಡಿದನು. ಭಾಗಮ್ಮನಿಗೆ ಆಗ ಏನು ಹೇಳಬೇಕೆಂಬುದೆ ತಿಳಿಯಲಿಲ್ಲ. ಹೇಗೆ ತಿಳಿಸಲಿ ಎಂದು ಹೊಯ್ದಾಡಿದಳು. ತಕ್ಷಣ ಹೊಳೆಯಿತು.

"ನೀವು ಅಂಜಿ ಓಡಿಹೋಗಬೇಕೆಂದು ನನ್ನ ಅಭಿಪ್ರಾಯವಲ್ಲ. ಶರಣ ಬಸವಪ್ಪನ ಜೀವವೂ ನಿಮ್ಮಂತೆ ಈಗ

ಅಪಾಯದಲ್ಲಿದೆ. ಹಳಿಪ್ಯಾಟಿ ಬಸಯ್ಯನ ಮನೆಯಲ್ಲಿ ಮೊನ್ನೆಯ ದಿನವೇ ಒಂದು ಗುಪ್ತ ಸಭೆ ನಡೆದು ತೀರ್ಮಾನಿಸಲಾಗಿದೆಯಂತೆ………". ಸಂಚು ಮಾಡಿದ್ದಾರೆಂದರೆ ಇವರೇನು ಜನಗಳೊ ದನಗಳೊ? ನನಗೆ ಏನಾದರೂ ಅನ್ನಲಿ, ಏನಾದರೂ ಮಾಡಲಿ. ಆತನನ್ನು…………" ಎನ್ನುತ್ತಿದ್ದಂತೆ ಕರುಳುಕ್ಕಿಬಂದು ಕಣ್ಣಲ್ಲಿ ನೀರು ಮಿಂಜಿದವು ಬಹಳ ಹೊತ್ತಿನವರೆಗೆ ಇಬ್ಬರೂ ಸುಮ್ಮನೆ ಕುಳಿತಿದ್ದರು. ಪುನಃ ಭಾಗಮ್ಮನೆ ಪ್ರಾರಂಭಿಸಿದಳು.

"ಕಲ್ಯಾಣದಲ್ಲಿ ಪರಿಸ್ಥಿತಿ ಹದಗೆಟ್ಟಾಗ ಬಸವಣ್ಣನವರೇ ಕೂಡಲಸಂಗಮಕ್ಕೆ ಹೋದರೆಂದು ಹೇಳುತ್ತೀರಲ್ಲ……"

"ಹೌದು. ನಾನು ಇಲ್ಲಿಂದ ಹೊರಟು ಹೋದರೆ ಅರಳಗುಂಡಿಗೆಯ ವಾತಾವರಣದಲ್ಲಿ ಬದಲಾವಣೆ ಬರುವುದೆ?"

"ತಕ್ಕಮಟ್ಟಿಗೆ ಪರಿಸ್ಥಿತಿ ಸುಧಾರಿಸಬಹುದಾಗಿದೆ. ನೀವು ಕಾಲ್ದೆಗೆದರೆ ಶರಣಬಸವಪ್ಪನವರನ್ನು ಕ್ಷಮಿಸುವ ಸಂಭವವಿದೆ. ನೀವಿಬ್ಬರು ಒಬ್ಬರನ್ನೊಬ್ಬರು ಅಗಲಬೇಕೆಂದೇ ಇದೆಲ್ಲ ಹೂಟ ಹೂಡಿದ್ದಾಗಿದೆ. ನಿಮ್ಮಿಬ್ಬರ ಕೀರ್ತಿ, ಪ್ರತಿಷ್ಠೆ ಸ್ನೇಹ ಶಿವಾನುಭವಗಳು ಇಲ್ಲಿಯ ಅನೇಕರ ಕಣ್ಣಲ್ಲಿ ಒತ್ತಿವೆ. ನಿಮ್ಮ ಬಗ್ಗೆ ವಿರೋಧ ಉಂಟಾದುದಕ್ಕೆ ಅದೇ ಮುಖ್ಯ ಕಾರಣ."

"ನಾನು ಕಾಲ್ದೆಗೆದರೆ ಶರಣಬಸವಪ್ಪನಿಗೆ ಸಹಾಯಕ ವಾಗುವಂತಿದ್ದರೆ ಇಗೋ ಈಗಲೇ ಹೊರಟೆ." ಎಂದು ಹೇಳುತ್ತ ತನ್ನ ಪೂಜಾ ಸಾಮಗ್ರಿ ಹಾಸಿಗೆ ಗಂಟುಗಳನ್ನು ಸಜ್ಜುಗೊಳಿಸಿಕೊಂಡನು. ಅಷ್ಟೊತ್ತಿಗೆ ನಿರೀಕ್ಷಿಸಿದಂತೆ ಗೌಡನಿಂದ ನಿಯೋಜಿತರಾದ ಹತ್ತೆಂಟು ಮಂದಿ, ಮಡಿವಾಳಪ್ಪನ ಹೆಸರನ್ನು ಹಿಡಿದು ಕೂಗುತ್ತ, ಅಶ್ಲೀಲವಾಗಿ ಬಯ್ಯುತ್ತ ಬರುತ್ತಿರುವುದು ಕೇಳಿಸಿತು. ತಾನು ಹೊರಟು ಹೋದ ಸಂಗತಿಯನ್ನು ಶರಣಬಸವಪ್ಪನಿಗೆ ತಿಳಿಸಬೇಕೆಂದು ಹೇಳುತ್ತ ಮಡಿವಾಳಪ್ಪ ದೇವಾಲಯದ ಹಿಂದಿನ ಪೌಳಿಯನ್ನು ಜಿಗಿದು ಕತ್ತಲೆಯಲ್ಲಿ ಮರೆಯಾದನು.

ಆ ಹೆಂಡಗುಡುಕರು ಬಂದು ಮಡಿವಾಳಪ್ಪನನ್ನು ಹುಡುಕಾಡಿದರು. ಆದರೆ ಎಲ್ಲಿಯೂ ಸಿಕ್ಕಲಿಲ್ಲ. ಭಾಗಮ್ಮನ ಗುಡಿಸಲಿಗೆ ಹೋಗಿ ನೋಡಿದರು. ಅಲ್ಲಿ ಆಕೆ ಒಬ್ಬಾಕೆಯೇ ಮಲಗಿಕೊಂಡಿದ್ದಳು. ಎಚ್ಚರಗೊಳಿಸಿ ವಿಚಾರಿಸಿದರೆ ಗಾಢ ನಿದ್ರೆಯಲ್ಲಿದ್ದವರಂತೆ ನಟಿಸಿ ಮಗ್ಗಲು ಬದಲಾಯಿಸಿ ಮುಸುಗೆಳೆದು ಮಲಗಿಕೊಂಡಳು.

ಮಡಿವಾಳಪ್ಪ ಕತ್ತಲೆಯಲ್ಲಿ ನಡೆದಿದ್ದರೂ ಲೋಕದ ಬದುಕಿಗೆ ಬೆಳಕು ನೀಡುವ ಹಾಡೊಂದನ್ನು ಹಾಡುತ್ತ ಸಾಗಿದನು.

ಏನೇನು ಹಗರಣ ಮಾಡುವರೀ ಜನರು
ಇದಕಾರಂಜುವರು

ಮಾನ ಅಪಮಾನ ಕೂನ ಅರಿಯದವರು
ಮಾನಗೇಡಿ ಮಾನವರು || ಪ ||

ಹೆಂಡಗುಡುಕರಿಗೆ ಹಿತವನು ಮಾಡುವರು
ಭಂಡಗೇಡಿ ಮಾನವರು
ಕಂಡರೆ ಸೇರರು ಕಾಣದೆ ಬೊಗಳುವರು
ಕುಂಡಿ ಹಡಸುವ ಜನರು || ೧ ||

ಕಾಮ ಕ್ರೋಧ ಲೋಭ ಮೋಹದಲ್ಲಿರುವರು
ಮದದೊಳು ಮೆರೆವರು
ಕಾಮಿತ ಕಂಡರೆ ಕೂನ ಹಿಡಿಯುವರು
ಅಪಘಾತಕ ಜನರು || ೨ ||

ಆಡಿದವರಿಗೆ ಆಡಿದ್ದಿರುವುದು
ನಮ್ಮದೇನು ಕೆಡುವುದು
ತಾ ಪಡೆದದ್ದೇ ಬರುವುದು || ೩ ||

ಹಾದಿಯಲ್ಲಿ ಬಂದ ಹಳ್ಳವನ್ನು ದಾಟಿ ಸ್ವಲ್ಪ ದೂರ ಹೋಗುತ್ತಲೇ 'ಕೋಣ ಸಿರಸಗಿ' ಗ್ರಾಮಬಂತು. ಅಲ್ಲೇ ಒಂದು ಗುಡಿಯಲ್ಲಿ ವಾಸ್ತವ್ಯ ಮಾಡಿಕೊಂಡು ಕೆಲಕಾಲ ಉಳಿದನು.

ತಾನು ಊರುಬಿಟ್ಟ ದಿನವೇ ಬಸಯ್ಯನಿಂದ ನೇಮಿತ ರಾದ ಜನ ಶರಣಬಸವಪ್ಪ ಬಿಲ್ವಪತ್ರಿ ತರುವುದಕ್ಕೆ ಹೋದಾಗ ಹಾದಿಯಲ್ಲಿ ಅವಿತುಕೊಂಡು ಕುಳಿತು ಆತನ ಕೊಲೆಗೆ

ಪ್ರಯತ್ನಿಸಿದ್ದಾಗಿಯೂ, ಆದರೆ ಕೊಲೆಗೈಯ್ಯಲು ಅವರಿಗೆ ಮನಸ್ಸು ಬಾರದೆ–ತಾವೇ ಪಶ್ಚಾತ್ತಾಪಪಟ್ಟು ಅವರೆಲ್ಲ ಹಿಂದಿರುಗಿದ್ದೂ–ಕೇಳಿ ಮಡಿವಾಳಪ್ಪ "ಶಿವನೇ ನಿನ್ನ ಲೀಲೆ ವಿಚಿತ್ರವಾಗಿವೆ!" ಎಂದು ತನ್ನಲ್ಲಿ ನುಡಿದುಕೊಂಡು ಶಿವ ನಗೆ ನಕ್ಕನು.

ಮಡಿವಾಳಪ್ಪ ಅರಳಗುಂಡಿಗೆ ತೊರೆದು ಕೋಣಸಿರಸಗಿಗೆ ಬಂದು ವಾಸಮಾಡಿದನಾದರೂ ಹಗರಣ ತಪ್ಪಲಿಲ್ಲ. ಕೋಣ ಸಿರಸಿಗೆಯಲ್ಲಿ ಮಡಿವಾಳಪ್ಪನ ವಾಸ್ತವ್ಯವಿದ್ದುದನ್ನು ತಿಳಿದು -ಅದು ಅರಳಗುಂಡಿಗೆಗೆ ಸಮೀಪವಿದ್ದರಿಂದಲೂ- ಭಾಗಮ್ಮ ಒಂದೆರಡು ಸಾರೆ ಆತನ ದರ್ಶನಕ್ಕೆ ಬಂದು ಹೋದಳು. ಯಾರ ಕಣ್ಣಿಗೂ ಬೀಳಬಾರದೆಂದು ಆಕೆ ಎಷ್ಟು ಎಚ್ಚರ ವಹಿಸಿದರೂ ಕಾಕ ದೃಷ್ಟಿಯಿಂದ ಕಾಯುತ್ತಿದ್ದ ಜನರಿಂದ ತಪ್ಪಿಸಿಕೊಳ್ಳುವುದಾಗಲಿಲ್ಲ. ರಂಧ್ರಾನ್ವೇಷಕರಿಗೆ ಇದೂ ಒಂದು ಘೋರ ಪಾತಕವಾಗಿ ಕಾಣಿಸಿತು.

ಮತ್ತೆ ಮಲ್ಲಪ್ಪಗೌಡನಿಗೆ ಚಾಡಿ ಹೇಳಿದರು. ಆತ ಹುಂಬನಂತೆ ಹತ್ತೆಂಟು ಆಳುಗಳನ್ನು ಕೋಣಸಿರಸಿಗಿಗೇ ಕಳಿಸಿಕೊಟ್ಟು ಹಿಡಿದುತರುವಂತೆ ಆಜ್ಞಾಪಿಸಿದನು.

ಮಡಿವಾಳಪ್ಪ ಮತ್ತೆ ಅಲ್ಲಿಂದ ತಪ್ಪಿಸಿಕೊಂಡು ಮುಂದಿನೂರಾದ ಜಂಬೇರಾಳಕ್ಕೆ ನಡೆದನು. ಅಲ್ಲಿ ರಘಪ್ಪಗೌಡನ ಆಶ್ರಯಸಿಕ್ಕಿತು. ಜಂಬುಲಿಂಗೇಶ್ವರ ದೇವಸ್ಥಾನ ಆತನ ವಾಸ್ತವ್ಯವಾಯಿತು.

ಕೆಲವು ದಿನಗಳ ತರುವಾಯ ಜಂಬೆರಾಳವನ್ನೂ ಬಿಟ್ಟು 'ಕಡಕೋಳ' ಗ್ರಾಮಕ್ಕೆ ಬಂದನು. ಕಡಕೋಳಗ್ರಾಮ ಆತನ ಕೊನೆಯಜೀವನಕ್ಕೆ ಆಡುಂಬೊಲವಾಯಿತು. ಭವ ವನ್ನು ಕಡಕೊಳ್ಳಬಯಸುವವರಿಗೆಲ್ಲ ಮುಕ್ತಿಕ್ಷೇತ್ರವಾಗಿ ಹೆಸರಿನ ಅನ್ವರ್ಥಕತೆಯನ್ನು ಪಡೆದುಕೊಂಡಿತು. ಮಡಿವಾ ಳಪ್ಪ ಇಲ್ಲಿ ಬಹುಶಾಂತ ಜೀವನವನ್ನು ಬದುಕಿದನು. ಸಮಸ್ಯೆ ದುಗುಡ-ದುರಂತಗಳಿಂದಲೇ ಪ್ರಾರಂಭವಾದ ಆತನ ಜೀವನ ಶಾಂತವಾಗಿ ಕೊನೆಯಾದದ್ದೊಂದು ಪವಾಡ!

ಅರಳಗುಂಡಿಗೆಯಲ್ಲಿ ಇದ್ದಾಗ ಎದ್ದ ಕೋಲಾಹಲ ಕಡಕೋಳಕ್ಕೆ ಬಂದೊಡನೆ ಎಲ್ಲ ಕಡಿದುಹೋಯಿತು. ಸ್ಥಬ್ಧ ವಾಯಿತು. ಶರಣಬಸವಪ್ಪ ಮತ್ತು ಮಡಿವಾಳಪ್ಪ ಅರಳ ಗುಂಡಿಗೆಯಲ್ಲಿ ಇರುತ್ತಿದ್ದಷ್ಟು ಕಾಲವೂ ಮಾನವರ ಎದೆ ಗುಂಡಿಗೆಗಳು ಅರಳಿದುವು. ದಾನವರು ಮಾತ್ರ ಕೆರಳಿದರು. ಆದರೆ ಇವರಿಬ್ಬರನ್ನೂ ಹೊರದೂಡಿ ಅದು ಬರೀ ಅರಲಿನ ಖಾಲಿ ಗಡಿಗೆಯಾಗಿ ಉಳಿದುಕೊಂಡಿತು. ಆ ಪುಣ್ಯವನ್ನು ಕಲ್ಬುರ್ಗಿ ಮತ್ತು ಕಡಕೋಳ ಗ್ರಾಮಗಳು ತುಂಬಿಕೊಂಡವು. ಮಾನವಬದುಕಿಗೆ ದೇವತ್ವದ ದೀಕ್ಷೆ ನೀಡುತ್ತಿರುವುವು.

ಕಡಕೋಳವಾಸಿಯಾದ ಮೇಲೆ ಮಡಿವಾಳಪ್ಪನ ಕೀರ್ತಿ ಪ್ರತಿಷ್ಠೆಗಳು ಹೆಚ್ಚಿದುವು. ಅದೇ ಸಮಯಕ್ಕೆ ಸುರಪುರದ ಅರಸರು ಅವರಿಗೆ ಕಡಕೋಳ ಗ್ರಾಮದ ಸುತ್ತಮುತ್ತಲಿನ ಸೀಮೆಯಲ್ಲಿ ಜಹಗೀರು ಹಾಕಿಕೊಟ್ಟರು. ಅಂದಿನಿಂದ

ಮಡಿವಾಳಪ್ಪನವರು ತಮ್ಮ ಪ್ರವಚನ ಅನುಭಾವಗೋಷ್ಠಿಯ ಕಾಯಕವನ್ನು ತೊರೆದು ಕೃಷಿತನವನ್ನೇ ತಮ್ಮ ಕಾಯಕ ವನ್ನಾಗಿ ಮಾಡಿಕೊಂಡರು.

ಕಡಕೋಳಗ್ರಾಮದ ಪೂರ್ವಕ್ಕೆ ಹಳ್ಳದ ದಂಡೆಯಲ್ಲಿ ತಮಗಾಗಿ ಒಂದು ವಸತಿಯನ್ನು ನಿರ್ಮಿಸಿಕೊಂಡರು. ಅದನ್ನೀಗ ಮಡಿವಾಳಪ್ಪನವರ ಮಠ ಎಂದು ಕರೆಯುತ್ತಾರೆ.

ಆ ಮಠದಲ್ಲೆ ಎತ್ತು, ಎಮ್ಮೆ, ದನಕರುಗಳನ್ನು ಕಟ್ಟಿ ಕೊಂಡು ಭರ್ಜರಿ ಬೇಸಾಯವನ್ನೇ ಆರಂಭಿಸಿದರು. ಮೊದಲಿ ನಂತೆ ಜಪ-ತಪ-ಅನುಷ್ಠಾನಗಳಲ್ಲಿ ಹೆಚ್ಚು ವೇಳೆ ಕಳೆಯಲಿಲ್ಲ. ಪ್ರವಚನ-ಶಿವಾನುಭವಗಳನ್ನು ಹೆಚ್ಚಾಗಿ ನಡೆಸಲಿಲ್ಲ. ಹೆಂಡಿ ಕಸ ಹೊಡೆಯುವುದು, ಕುಳ್ಳು ಹಚ್ಚುವುದು, ಸಾರಣೆ ಕಾರಣೆ ಮಾಡುವುದು-ಮಜ್ಜಿಗೆ ಕಡಿಯುವುದು, ಮೇವು ತರುವುದು ಮುಂತಾದ ಕೆಲಸಗಳನ್ನು ಅತ್ಯಂತ ಆಸಕ್ತಿ ಹಾಗೂ ತಾದಾತ್ಮ್ಯಗಳಿಂದ ನೆರವೇರಿಸಹತ್ತಿದರು.

ಮಡಿವಾಳಪ್ಪನವರನ್ನು ಕಾಣಲು ದೂರ ದೂರದಿಂದ ಜನರು ಬರತೊಡಗಿದರು. ಆಗ ಯಾರಿಗೂ ಬೋಧೆ ಸಿಗುತ್ತಿರ ಲಿಲ್ಲ. ಅವರ ಬದುಕು ಸಿಗುತ್ತಿತ್ತು. ಅದನ್ನು ಯಾರು ಎಷ್ಟು ಅರ್ಥಮಾಡಿಕೊಂಡರೋ ಹೇಳಲಿಕ್ಕಾಗದು! ಅಪಾರ್ಥ ಮಾಡಿಕೊಂಡವರೇ ಹೆಚ್ಚು ಜನ.

ಒಂದು ಸಲ ಜೇವರ್ಗಿ ತಾಲೂಕಿಗೆ ಸೇರಿದ ಗಂವ್ಹಾರ ಗ್ರಾಮದ ಬಸವಲಿಂಗ ಶಾಸ್ತ್ರಿಗಳು ಅವರ ದರುಶನಕ್ಕೆ

ಬಂದರು. ಬಸವಲಿಂಗ ಶಾಸ್ತ್ರಿಗಳೂ ಆ ವೇಳೆಗಾಗಲೇ ಪ್ರಕಾಂಡ ಪಂಡಿತರೆಂದು-ಅನುಭಾವಿಗಳೆಂದು ಖ್ಯಾತನಾಮರಾಗಿದ್ದರು. ಅಂಥವರಿಗೂ ಮಡಿವಾಳಪ್ಪನವರ ನಿಲುವು ತಿಳಿಯಲಿಲ್ಲ ವೇನೋ. ಅವರು ಬಂದಾಗ ಮಡಿವಾಳಪ್ಪನವರು ಕುಳ್ಳು ಹಚ್ಚುತ್ತಿದ್ದರು. ಅದನ್ನು ಕಂಡು ಮಡಿವಾಳಪ್ಪನವರಿಗಿನ್ನೂ ಈ ಸಂಸಾರದ ಮಾಯೆ ಬಿಟ್ಟಂತಿಲ್ಲ ಎಂದು ಅರ್ಥಮಾಡಿ ಕೊಂಡರು.

"ಏನ್ರೀ...... ಮಡಿವಾಳಪ್ಪನೋರೆ...... ನಿಮಗಿನ್ನೂ ಮಾಯೆ ಬಿಟ್ಟಂತಿಲ್ಲ!" ಎಂದು ತಮ್ಮ ಅನುಮಾನವನ್ನು ವ್ಯಕ್ತಪಡಿಸಿದರು. ಶಾಸ್ತ್ರಿಗಳ ಮಾತು ಕೇಳಿ ಮಡಿವಾಳಪ್ಪನಿಗೆ ರೋಷಬಂತು.

ಮಾಯಿ ಯಾವುದ್ಹೇಳೋ ಶಾಸ್ತ್ರಿ| ನಿನ್ನ|
ಆಯುತ್ವರಿಯದೆ ಭಾಳ ಬಾಯಿ ಕಿಸ್ತ್ರಿ || ಪ ||

ಎಂದು ನಿಷ್ಠುರ ನುಡಿದ. ಮಾಯೆಯಾವುದು? ನಿರ್ಮಾಯೆಯಾವುದು? ಎಂಬುದನ್ನು ತಿಳಿಸಿದ. ಆಗ ಶಾಸ್ತ್ರಿಗಳಿಗೆ ನಿಜದರಿವು ಉಂಟಾಯಿತು.

ಒಂದುಸಲ ಮಡಿವಾಳಪ್ಪನನ್ನು ಯಾರೋ ಊಟಕ್ಕೆ ಕರೆದೊಯ್ದಿದ್ದರು. ಅವರ ಮನೆಯಲ್ಲಿ ಮಾಡಿದ್ದ ಎಣ್ಣೆ ಬದನೆಕಾಯಿಗಳು ಬಹಳ ರುಚಿಕಟ್ಟಾಗಿದ್ದವು. ಅವನ್ನು ಮತ್ತಷ್ಟು ಮತ್ತಷ್ಟು ಬೇಡಿ ನೀಡಿಸಿಕೊಂಡು ಉಂಡನು.

ತೃಪ್ತಿಯಾಗಲಿಲ್ಲ. ಮತ್ತೆ ಬೇಡಿದನು. ಆದರೆ ಅವು ಆಗಲೆ ಮುಗಿದು ಹೋಗಿದ್ದವು.

ತನ್ನ ಆಶೆಬುರುಕತನಕ್ಕೆ ತಾನೇ ನಾಚಿ ನೀರಾದನು. ಇದಕ್ಕೆ ತಕ್ಕ ಪಶ್ಚಾತ್ತಾಪ ಮಾಡಿಕೊಳ್ಳಬೇಕೆನಿಸಿತು.

ಸರಿ. ಮಠದ ಬಲಪಕ್ಕದಲ್ಲಿದ್ದ ಬೀಳು ನೆಲವನ್ನೆ ಅಗಿದನು. ಕಲ್ಲು ಬಂಡೆಗಳನ್ನು ತೆಗೆದನು. ನೆಲ ಹದವಾದ ಬಳಿಕ ಅದರ ಪಕ್ಕದಲ್ಲೇ ಒಂದು ಬಾವಿಯನ್ನು ಸ್ವತಃ ತಾನೆ ಅಗಿದು ಸಜ್ಜುಗೊಳಿಸಿದನು. ಎಣ್ಣೆ ಬದನೆಕಾಯಿಯ ಅಗಿಗಳನ್ನು ತಂದು ಹಚ್ಚಿ ತೋಟ ಮಾಡಿ ನೀರುಣಿಸಿದನು.

ತಿಂಗಳೊಪ್ಪತ್ತಿನಲ್ಲಿ ಬದನೆಕಾಯಿ ಫಲ ಇಳಿದವು. ಒಂದು ಪುಟ್ಟಿಯಷ್ಟು ಎಣ್ಣೆಗಾಯಿಗಳನ್ನು ಹರಿದುಕೊಂಡೊಯ್ದು ಒಳ್ಳೇ ಮಸಾಲೆ, ಖಾರ, ಉಪ್ಪು ಮುಂತಾದವುಗಳನ್ನು ಹಾಕಿ; ನೋಡಿದರೆ ಬಾಯಲ್ಲಿ ನೀರು ಬರುವಂತೆ–ಪಲ್ಯ ಮಾಡಿದನು. ಅದರ ಜೊತೆಗೆ ರೊಟ್ಟಿ, ಚಪಾತಿ, ಯಾವುದನ್ನೂ ಬಳಸಿಕೊಳ್ಳದೆ–ಬರೀ ಬದನೆಕಾಯಿಗಳನ್ನೆ ಒಂದು ದೊಡ್ಡ ತಟ್ಟೆಯಲ್ಲಿ ಎಡೆಮಾಡಿಕೊಂಡು ತಿನ್ನಹತ್ತಿದನು. ಸ್ವಲ್ಪ ಹೊತ್ತಿನಲ್ಲಿಯೇ ಸಾಕಾಗಿಬಿಟ್ಟಿತು. ಬಾಯಿರುಚಿ ತಪ್ಪಿತು. ಆದರೂ ಕೇಳಲಿಲ್ಲ. ಬಾಯಿ ಒಲ್ಲೆನೆಂದರೂ ಕೈ ಸಡಿಲು ಮಾಡಲಿಲ್ಲ. ಒಂದೆಸಮನೆ ತುರುಕಿದನು. ವಾಕರಿಕೆ ಬಂತು. ಅದರಿಂದ ಸಿಟ್ಟು ಬಂತು. "ಅವೊತ್ತು ಎಷ್ಟು ಆಸೆ ನಿನ್ನದು. ಇವೊತ್ತು ತಗೊ ತಿನ್ನು ಸಾಕಾಗುವಷ್ಟು"

ಎಂದು ಹೇಳುತ್ತ ದವಡೆಗೆ ಬಡಿದುಕೊಳ್ಳತೊಡಗಿದನು. "ತಿನ್ನು ತಿನ್ನು" ಎಂದು ಮತ್ತೆ ಬದನೆಕಾಯಿಗಳನ್ನು ಬಾಯಲ್ಲಿ ತುರುಕಿದನು. ಕೊನೆಗೆ ಮನಸ್ಸು ನಾಚಿಕೊಂಡಿತು. ಆಸೆಯ ಧ್ಯಾಸ ಅಳಿಯಿತು. ಪಶ್ಚಾತ್ತಾಪಪಟ್ಟಿತು. ಅನ್ಯರ ವಸ್ತುವನ್ನು ಆಸೆ ಮಾಡಬಾರದು ಎಂದು ಅದಕ್ಕೆ ಬುದ್ಧಿವಾದ ಹೇಳಿ ತಿನ್ನುವುದನ್ನು ನಿಲ್ಲಿಸಿದನು.

ಇನ್ನೊಮ್ಮೆ ಎಲ್ಲೋ ಹೊರಟಿದ್ದನು. ಹಾದಿಯಲ್ಲೊಂದು ಕಬ್ಬಿನತೋಟ ಕಾಣಿಸಿತು. ಒಡನೆ ಕಬ್ಬು ತಿನ್ನಬೇಕೆಂಬಿಚ್ಛೆ ಪ್ರಬಲವಾಯಿತು. 'ಅದು ಪರರ ಸ್ವತ್ತು. ಅದಕ್ಕೆ ಆಸೆ ಮಾಡಬೇಡ' ಎಂದು ಸ್ವಗತವಾಡಿಕೊಂಡನು. ಆದರೂ ಮನಸ್ಸು ಕೇಳಲಿಲ್ಲ. ಕಬ್ಬಿನ ತೋಟದೊಳಗೆ ಹೊಕ್ಕನು. ಹೊಲದೊಡೆಯರಾರೂ ಕಾಣಲಿಲ್ಲ. ಒಡನೆ ಕಬ್ಬುಗಳನ್ನು ಮುರಿದು ತಿನ್ನಹತ್ತಿದನು. ಸ್ವಲ್ಪ ಹೊತ್ತಿನಲ್ಲೇ ಹೊಲದೊಡೆಯ ಬಂದು ಅದೇ ಮುರಿದ ಕಬ್ಬಿನಿಂದಲೇ ಮಡಿವಾಳಪ್ಪನನ್ನು ಚೆನ್ನಾಗಿ ಥಳಿಸಿದನು. ಮಡಿವಾಳಪ್ಪ ಸುಮ್ಮನೆ ಹೊಡಿಸಿಕೊಂಡದ್ದಲ್ಲದೆ ಮತ್ತೆ "ಇನ್ನೂ ಹೊಡಿಯಪ್ಪ ಈ ನಾಚಿಕಿಗೇಡಿಗೆ. ಎಷ್ಟು ಹೇಳಿದರೂ ಕೇಳಲಿಲ್ಲ. ಹೂಂ... ಹೊಡಿ!..." ಎಂದು ಬೆನ್ನು ಬಾಗಿಸಿ ನಿಂತ-ಕೊಂಡನು. ಆತನ ಬೆನ್ನಮೇಲೆ ಎದ್ದ ಬಾಸುಂಡೆಗಳನ್ನು ನೋಡಿ ಹೊಲದೊಡೆಯನಿಗೆ ಕರುಣೆ ಬಂತು. ಬಿಟ್ಟುಹೋದನು.

ಲೋಕ ವಿಪರೀತವಾದ ಇಂಥ ಇನ್ನೂ ಅನೇಕ ಘಟನೆಗಳನ್ನು ಜರುಗಿಸುತ್ತ ಮಡಿವಾಳಪ್ಪ ಕಡಕೋಳದಲ್ಲಿ ತನ್ನ

ಮಹಾತ್ಮೆ ಮೆರೆದನು. "ಮಾಡಿ ಉಂಡರೆ ಮನಾರು| ಬೇಡಿ ಉಣ್ಣೋದು ಸುವಾರು|" ಎಂಬ ತತ್ವವನ್ನು ಸ್ವತಃ ತಾನು ಬದುಕಿನಲ್ಲಿ ತಂದುಕೊಂಡು ತೋರಿಸಿದನು. ಕಡಕೋಳಕ್ಕೆ ಬರುವವಮುನ್ನ ಏನನ್ನು ಲೋಕಕ್ಕೆ ಬೋಧಿಸಿದ್ದನೋ ಅದನ್ನೇ ಅಲ್ಲಿ ಬದುಕಿದನು.

ಒಂದುದಿನ ಇದ್ದಕ್ಕಿದ್ದಂತೆ ಅರಳಗುಂಡಿಗೆಯು ಪೋಲೀಸ ಗೌಡನಾದ ಮಲ್ಲಪ್ಪಗೌಡನು ಕಡಕೋಳ ಮಠಕ್ಕೆ ಆಗಮಿಸಿ ಬಾಗಿಲಲ್ಲೇ ಸಾಷ್ಟಾಂಗ ಪ್ರಣಾಮಗಳನ್ನು ಸಲ್ಲಿಸಿದನು. ಮೊದಲಿಗೆ ಅವನಾರೆಂಬುದು ಮಡಿವಾಳಪ್ಪನಿಗೆ ಗೊತ್ತಾಗ ಲಿಲ್ಲ. ಏಕೆಂದರೆ ಮಹಾರೋಗ ತಗುಲಿ, ಮುಖ ಕೈ ಬಾಯಿ ಮುಂತಾದ ಅವಯವಗಳೆಲ್ಲ ಅಂದಗೆಟ್ಟಿದ್ದವು. ಆತ ಮಲ್ಲಪ್ಪ ಗೌಡನೆಂಬ ಅರಿವಾಗುತ್ತಲೆ ಮಡಿವಾಳಪ್ಪನವರ ಪಿತ್ಥ ನೆತ್ತಿ ಗೇರಿತು. ಮನಬಂದತೆ ಬಯ್ದರು, ನಿಂದಿಸಿದರು, ಅಶ್ಲೀಲ ವಾಗಿ ತೆಗಳಿದರು. ಮಲ್ಲಪ್ಪಗೌಡ ಪಿಟ್ಟೆನ್ನಲಿಲ್ಲ. ಅದಕ್ಕೆ ಪ್ರತಿಯಾಗಿ ಮತ್ತೆ ಮಡಿವಾಳಪ್ಪನವರ ಪಾದಗಳಿಗೆ ಬಿದ್ದು ಕಣ್ಣೀರ್ಗರೆಯುತ್ತ

"ನಾನು ನಿಮ್ಮನರಿಯಲಿಲ್ಲ. ಅನ್ಯರ ಚಾಡಿ ಮಾತುಗಳನ್ನು ಕೇಳಿ ಕೆಟ್ಟು ಹೋದೆ. ಸಲ್ಲದ ಅಪವಾದ ಕೊಟ್ಟೆ. ನಿಂದೆ ಮಾಡಿದೆ. ಅಲ್ಲದೆ ಬಹು ದುಷ್ಟತನವನ್ನೂ ನಿಮ್ಮ ಮೇಲೆ ತೋರಿದೆ... ಅದಕ್ಕೆ ಶಿವ ನನಗೆ ಏನಮಾಡಬೇಕೋ ಅದನ್ನು ಮಾಡಿದ್ದಾನೆ. ದಯವಿಟ್ಟು ಕ್ಷಮಿಸಿ ತಂಗಿ ಭಾಗಮ್ಮನನ್ನು

ಉದ್ಧರಿಸಿದಂತೆ, ನನ್ನನ್ನು..." ಎಂದು ಬಿನ್ನವಿಸುತ್ತಿದ್ದಂತೆ ಅವರು ಮತ್ತಷ್ಟು ಕುಪಿತರಾಗಿ–

"ಇಲ್ಲಿಗ್ಯಾಕೆ ಬಂದಿ? ಅಲ್ಲಿಗೇ ಹೋಗು. ಆಕೆ ಕಾಲಿಗೆ ಬಿದ್ದು ಕೇಳಿಕೋಽ........." ಎಂದು ಗರ್ಜಿಸಿದರು.

"ತಂದೆ! ನಾನೀಗ ತುಂಬ ನೊಂದಿದ್ದೇನೆ. ತಂಗಿಯನ್ನೇ ಕಾಲು ಬಿದ್ದು ಬೇಡಿದೆ. ಆಕೆ ನಿಮ್ಮಹತ್ತಿರವೇ ಹೋಗೆಂದು ಕಳಿಸಿದ್ದಾಳೆ. ತಾವು ಕೈ ಬಿಡಬಾರದು...... ನೀವು ಹೇಳಿದಂತೆ ಕೇಳುತ್ತೇನೆ"

ಹಾಗಿದ್ದರೆ ನಿನ್ನ ಹೆಂಡತಿಯನ್ನು ತಂದೊಪ್ಪಿಸುತ್ತೀಯಾ?..."

"ಓಹೋಽ... ಅಗತ್ಯವಾಗಿ ! ಈಗಲೆ ಹೊರಟೆ......"

ಎನ್ನುತ್ತ ಮಲ್ಲಪ್ಪಗೌಡ ಎದ್ದು ಹೊರಹೊಂಟನು. ಹೊಸ್ತಿಲು ದಾಟುವವರೆಗೆ ಸುಮ್ಮನಿದ್ದು-ಹಿಂದಕ್ಕೆ ಕರೆಯಿಸಿಕೊಂಡ ಮಡಿವಾಳಪ್ಪನವರು–

"ನಿನ್ನ ಮನಸ್ಸಿನ ಪರೀಕ್ಷೆಗಾಗಿ ಹಾಗೆ ಸಿಟ್ಟಿನ ಭರದಲ್ಲಿ ಅಂದೆ. ನಿನ್ನ ಹೆಂಡತಿಯನ್ನು ತೆಗೆದುಕೊಂಡು ನಾನೇನು ಮಾಡಲಿ?......"

–ಎಂದು ಹೇಳಿ ಯಾವುದೋ ನಾಡೌಷಧವನ್ನು ಕೊಡಲು ಹೋದರು. ಆದರೆ ಮಲ್ಲಪ್ಪಗೌಡ ಅದನ್ನು

ಸ್ವೀಕರಿಸಲಿಲ್ಲ. ನನ್ನ ಹೆಂಡತಿಯನ್ನು ತಂದು ಒಪ್ಪಿಸಿಯೇ ಔಷಧ ತೆಗೆದುಕೊಳ್ಳುವೆ. ಅಲ್ಲಿಯವರೆಗೆ ಅದನ್ನು ಮುಟ್ಟಲಾರೆ. ಎಂದು ಹೇಳಿ, ಮಡಿವಾಳಪ್ಪನವರು ಎಷ್ಟು ಸಮಜಾಯಿಷಿ ಹೇಳಿದರೂ ಕೇಳದೆ ತನ್ನ ಹೆಂಡತಿ ಬಸವಲಿಂಗಮ್ಮಗೌಡತಿಯನ್ನು ತಂದು ಮಡಿವಾಳಪ್ಪನವರ ಪಾದಕ್ಕೆ ಒಪ್ಪಿಸಿದನು.

ಮಡಿವಾಳಪ್ಪನವರು ಅನಿವಾರ್ಯವಾಗಿ ತನ್ನ ಮಠದೊಳಕ್ಕೆ ಆಕೆಯನ್ನು ಬರಮಾಡಿ ಕೊಂಡರು. ಆದರೆ ಆ ಭಾವದಿಂದಲ್ಲ. ತಮ್ಮ ಮಗಳೆಂಬ ಕಕ್ಕುಲಾತಿಯ ಭಾವದಿಂದ.

ಅಲ್ಲಿಗೆ ಬರುವ ಮುನ್ನ ಸಿದ್ದಲಿಂಗಪ್ಪ-ಕ್ಯಾತಪ್ಪ ಮತ್ತು ಸಿದ್ದಪ್ಪ ಎಂಬ ಮೂರು ಗಂಡು ಮಕ್ಕಳಿದ್ದರು. ಬಸಲಿಂಗಮ್ಮಗೌಡತಿ ಮೂರು ತಿಂಗಳು ಗರ್ಭಿಣಿಯೂ ಇದ್ದಳು. ಅಲ್ಲಿ ಬಂದ ನಾಲ್ಕಾರು ತಿಂಗಳಲ್ಲಿ ಹೆಣ್ಣು ಕೂಸೊಂದಕ್ಕೆ ಜನ್ಮ ಕೊಟ್ಟಳು. ಮಡಿವಾಳಪ್ಪನವರು ಮಗಳ ಬಾಣಂತನವನ್ನು ಬಲು ಸೊಗಸಾಗಿ ಮಾಡಿದರು.

ತಮ್ಮ ತರುವಾಯ ತಮ್ಮ ಮಠಕ್ಕೆ ಉತ್ತರಾಧಿಕಾರಿಯನ್ನಾಗಿ ಆಕೆಯ ಹಿರಿಮಗ ಸಿದ್ದಲಿಂಗಪ್ಪನನ್ನೇ ನೇಮಿಸಿದರು. ಒಂದೆರಡು ತಲೆಗಳವರೆಗೆ ಅವರ ವಂಶಾವಳಿಯವರೇ ಉತ್ತರಾಧಿಕಾರಿಗಳಾಗಿ ನೇಮಕಗೊಂಡರು. ಆದರೆ ಮುಂದೆ ಆ ವಂಶ ನಿಂತುಹೋದದ್ದರಿಂದ ಅಲ್ಲೇ ಸಮೀಪ ಗ್ರಾಮವಾದ ತೆಲಗುಬಾಳದ ಬಸವಲಿಂಗಯ್ಯನವರ ಮಕ್ಕ

ಳಾದ ವೀರಯ್ಯನನ್ನು-ಕಡಕೋಳ ಗ್ರಾಮಸ್ಥರು-ನೇಮಿಸಿದರು. ಅಂದಿನಿಂದ ಅವರ ವಂಶಜರೇ ಈ ಮಠದ ಉತ್ತರಾಧಿಕಾರಿಗಳಾಗಿದ್ದಾರೆ.

ಮಲ್ಲಪ್ಪಗೌಡ ಆಜೀವನಪರ್ಯಂತರವೂ ಮಡಿವಾಳಪ್ಪನವರ ಸೇವೆ ಮಾಡಿಕೊಂಡಿದ್ದು ಅಲ್ಲೇ ಸಮಾಧಿಸ್ಥನಾದನು. ಆದರಂತೆ ಬಸಲಿಂಗಮ್ಮ ಗೌಡತಿ; ಗೌಡನತಂಗಿ ಭಾಗಮ್ಮ ಇವರೆಲ್ಲರೂ ಅಲ್ಲೇ ವಾಸವಾಗಿದ್ದು-ಅಲ್ಲೇ ಲಿಂಗೈಕ್ಯರಾದರು. ಮಠದ ಹಿಂದುಗಡೆಯಲ್ಲಿ ಈಗಲೂ ಅವರ ಸಮಾಧಿಗಳಿವೆ.

ಮಡಿವಾಳಪ್ಪನವರು ಲಿಂಗೈಕ್ಯರಾದ ದ್ಯೋತಕವಾಗಿ ಪ್ರತಿವರ್ಷವೂ ಕಡಕೋಳದಲ್ಲಿ ಹೊಸ್ತಲಹುಣ್ಣಿಮೆಯ ಸಪ್ತಮಿ ಅಷ್ಟಮಿಯಂದು ಜಾತ್ರೆ ಸೇರುತ್ತದೆ. ತೇರು ಸಾಗುತ್ತದೆ. ಮಡಿವಾಳಪ್ಪನವರ ಆತ್ಮ ಅಂದು ಆಗಮಿಸಿ-ತೇರು ಸಾಗುತ್ತಿದ್ದಿದಂತೆ—

"ಇನ್ನೇನಿನ್ನೇನೊ | ಇನ್ನೇನಿನ್ನೇನೊ |
ತನ್ನ ತಾ ತಿಳಿದ ಮ್ಯಾಲೆ ಇನ್ನೇನಿನ್ನೇನೊ |
ತನ್ನಂತೆ ಸರ್ವಜೀವರ ಮನ್ನಿಸಿ ಮೂಕಾದ ಮ್ಯಾಲೆ|
ಇನ್ನೇನಿನ್ನೇನೋ | ಇನ್ನೇನಿನ್ನೇನೊ"

ಎಂದು ಹಾಡುತ್ತದೆಯಂತೆ.

## ೫. ಕಾವ್ಯ–ಭಾಷೆ–ಬದುಕು

ಮಡಿವಾಳಪ್ಪ ಹುಟ್ಟಿದ್ದು ಬಿದನೂರಾಗಿದ್ದರೂ ನಿರ್ವಯು ಲಾದದ್ದು ಕಡಕೋಳವಾದ್ದರಿಂದ "ಕಡಕೋಳ ಮಡಿವಾಳಪ್ಪ" ನೆಂದೇ ಈ ಕವಿ ಅನುಭಾವಿಯನ್ನು ಹೆಸರಿಸುತ್ತಾರೆ. ಸಗರನಾಡಿನ ಸತ್ವವನ್ನು ಬಡಿದೆಬ್ಬಿಸಿದ ಕವಿಯಾದ್ದರಿಂದ ಈಗಲೂ ಆತನ ಹೆಸರು ಇಲ್ಲಿ ಹಚ್ಚಹಸುರಾಗಿದೆ. ಪಟ್ಟಣಗಳಿಗಿಂತ ಹಳ್ಳಿಗಳಲ್ಲಿ ಈ ಕವಿಯಬಗ್ಗೆ ಹೆಚ್ಚಿನ ಮಾಹಿತಿ ಸಿಗುತ್ತದೆ. ಹಾಡುಗಳೂ ಇಲ್ಲಿ ಹೆಚ್ಚು ಪ್ರಚಾರದಲ್ಲಿವೆ.

ಇದಕ್ಕೆ ಮುಖ್ಯಕಾರಣ ಆತನ ಭಾಷೆ. ಮಡಿವಾಳಪ್ಪ ಜಾನಪದ ಸತ್ವದಿಂದೆದ್ದು ಬಂದ ಕವಿ. ಜಾನಪದ ಧರ್ಮವನ್ನು ಸಂಸ್ಕೃತಿಯನ್ನು ಮೈಗೂಡಿಸಿಕೊಂಡ ಅನುಭಾವಿ. ಶರಣ ತತ್ವಗಳನ್ನು ಜಾನಪದ ಸ್ತರಕ್ಕಿಳಿಸಿ ಅವನ್ನು ಹೆಚ್ಚು ಶ್ರೀಮಂತಗೊಳಿಸಿದ–ಜೀವಂತಪಡಿಸಿದ ಶರಣಕವಿ.

ಆತನದು ನೇರವಾಗಿ ಹೃದಯಕ್ಕೆ ಸೇರುವ ಕಾವ್ಯ. ಅದರಲ್ಲೂ ಜಾನಪದ ಹೃದಯಕ್ಕೆ ಮುಟ್ಟುವ ಕಾವ್ಯ. ನಾಗರಿಕ ಭಾಷೆಯ ಮಡಿವಂತರಿಗೆ ಆತನ ಭಾಷೆ ಒರಟಾಗಿ ಕಾಣಿಸ

ಬಹುದು. ಅಶ್ಲೀಲವೂ ಅನ್ನಿಸ ಬಹುದು ಆಗ ಆತ ತತ್ವ ಹೇಳಿದ್ದು ಜಾನಪದ ಜೀವನಕ್ಕೆ. ಆ ಜೀವನ ನಾಗರಿಕ ಭಾಷೆಯ ಮೃದು ಪದಗಳ ಕೋಮಲ ಭಾವನೆಗಳನ್ನು ಅಷ್ಟಾಗಿ ಗ್ರಹಿಸಿ ಕೊಳ್ಳಲಾರದು. ಗ್ರಹಿಸಿಕೊಂಡರೂ ಅರಗಿಸಿಕೊಳ್ಳಲಾರದು. ಆದ್ದರಿಂದ ಜಾನಪದ ಬದುಕಿಗೆ ಒಗ್ಗುವ ಭಾಷೆಯನ್ನೇ ಮಡಿವಾಳಪ್ಪ ಬಳಸಿದ. ಜಾನಪದ ಸೂಕ್ಷ್ಮಗ್ರಾಹಿಯಲ್ಲವಾದ್ದ ರಿಂದ ಚಬಕಿನಂತೆ ಚುಟಿಯಾದ ಭಾಷೆಯನ್ನೇ ಆತ ದುಡಿಸಿದ, ಚುರುಕುಮುಟ್ಟಿಸಿದ.

ಅಲ್ಲದೆ ಅಂದಿನ ಜನಪದ ಜೀವನವೂ ಬಹಳಷ್ಟು ಹಸ ಗೆಟ್ಟದ್ದೂ ಆತ ಆ ಭಾಷೆ ಬಳಸಿದ್ದಕ್ಕೆ ಮತ್ತೊಂದು ಕಾರಣ. ಚುರಕು ಮುಟ್ಟಿಸುವ ಬಿರುಸು ಭಾಷೆಯಲ್ಲಿ ಹೇಳಿದ್ದರಿಂದಲೇ ಅಂದು ಜನರಿಗೆ ಆತನ ಹಾಡುಗಳು ಹಿಡಿಸಿದವು. ಈಗಲೂ ಹಿಡಿಸುತ್ತಿವೆ. ಮಡಿವಾಳಪ್ಪ ಜನತೆಯ ಕವಿ. ಜನಪದ ದೊಂದಿಗೆ ಆತ ಅಷ್ಟೊಂದು ಗಾಢವಾಗಿ ಬೆರೆತಿದ್ದುದರಿಂದಲೇ ಆ ಭಾಷೆಯ ಕಾವ್ಯ ಹೇಳುವುದಕ್ಕೆ ಸಾಧ್ಯವಾಯಿತು.

ಮಡಿವಾಳಪ್ಪನಿಂದ ಜಾನಪದ ಭಾಷೆಗೆ ಅನುಭಾವದ ದೀಕ್ಷೆ ದೊರೆಯಿತು. ಅಷ್ಟು ದಿನ ಗ್ರಂಥಸ್ಥ ಭಾಷೆಯಲ್ಲೇ ಹೆಚ್ಚಾಗಿ ವಿಹರಿಸುತ್ತಿದ್ದ ಅನುಭಾವದ ಸೆರೆಯನ್ನು ಬಿಡಿಸಿ ಜಾನಪದಕ್ಕೂ ತಂದು ತೊಡಿಸಿದ ವಾಗ್ಗೇಯಕಾರ ನೀತ. ಜಾನಪದ ಭಾಷೆಯೂ ಅನುಭಾವದೆತ್ತರವನ್ನು ಒಳಗೊಳ್ಳ ಬಹುದೆಂದು ಸಿದ್ಧಪಡಿಸಿದ ಪ್ರಾಯೋಗಿಕ ಕವಿ.

ಕೊಡಕೊಳ್ಳುವ ವ್ಯವಹಾರಕ್ಯಾಕೆ ಅನುಮಾನ
ಕೊಡದೆ ಕೇಳಬೇಕಾದರದಕೆ ಜಾಮೀನ || ಪ ||
ರಜಪತ್ರ ರುಜುಪತ್ರ ಮುದ್ದಾಸ್ತಿ ಜಾಮೀನ
ಗುಜರಾಣಿ ಘನಮಾತ ಆಗುವುದು ಅಜ್ಞಾನ
ನಿಜವಾದ ಮೇಲೆ ಸರ್ವವು ತಾನೆತನ್ಮಯ
ಹುಜೂರುಂಟೆ ತನ್ನರ್ಥ ಪ್ರಾಣಭಿಮಾನ || ೧ ||

ಇಲ್ಲಿ ಕಾವ್ಯ ಇರಲಿಕ್ಕಿಲ್ಲ. ಆದರೆ 'ಗುಜರಾಣಿ' 'ರುಜುಪತ್ರ' 'ರಜಪತ್ರ' 'ಜಾಮೀನ' 'ಮುದ್ದಾಸ್ತಿ' 'ಹುಜೂರ' ಎಂಬ ಜಾನಪದ ಶಬ್ದಗಳು ಅನುಭಾವದ ರಸಲೇಪನೆಯಿಂದ ಉದ್ದೀಪ್ತ ಗೊಂಡಿವೆ.

ಮಡಿವಾಳಪ್ಪನ ಹಾಡುಗಳಲ್ಲೆಲ್ಲಿಯೂ ಆಗಮ-ಪುರಾಣ-ಶಾಸ್ತ್ರ, ಸ್ಮೃತಿಗಳ ಉದ್ಧರಣೆ ಬರುವುದಿಲ್ಲ. ಆತನದು ಅಚ್ಚ ಜಾನಪದ ಪ್ರತಿಭೆಯಾದ್ದರಿಂದ ನಾಣ್ನುಡಿಗಳ ಬಳಕೆ, ಒಡಪು ಮಾತಿನ ಸೊಗಸು, ದೇಸಿನುಡಿಗಳ ಜಾಣ್ಮೆ ಕಾಣಸಿಗುತ್ತದೆ. ಸರ್ವಜ್ಞನಂತೆ ಅನುಭವಿಯ ವಾದವೇ ವೇದವೆಂದು ನಂಬಿದವನೀತ. ತನ್ನ ಅನುಭವಕ್ಕೆ ಬಾರದ ಯಾವ ಒಂದು ಮಾತನ್ನೂ ಹೇಳದ ಪ್ರಾಮಾಣಿಕ ಕವಿ ಈತ. ತತ್ವವಿರಲಿ, ಧರ್ಮವಿರಲಿ ಎಲ್ಲವೂ ಈತನ ಅನುಭಾವದ ಮೂಸೆಯಲ್ಲಿ ಕರಗಬೇಕು.

ಈತ ಅನುಭಾವಿ-ಶರಣಕವಿ ಎಂದಮಾತ್ರಕ್ಕೆ ಲೋಕಜೀವನದ ವಿವಿಧ ಮುಖಗಳನ್ನು ಅರಿಯದ-ಕೇವಲ ಆಧ್ಯಾ

ತ್ಮಿಕ ಎತ್ತರವನ್ನು ಮಾತ್ರ ಪಡೆದುಕೊಂಡಾತ–ಎಂದಿಷ್ಟೆ ನುಡಿದು ಮುಂದೆ ಸಾಗಿದರೆ ಮಡಿವಾಳಪ್ಪನ ಕಾವ್ಯ, ಭಾಷೆ, ವ್ಯಕ್ತಿತ್ವಗಳನ್ನು ಪೂರ್ತಿ ಅರಿತಂತೆ ಆಗಲಾರದು. ಜಪ ತಪ ಯೋಗ ಅನುಸಂಧಾನಗಳು–ಅಧ್ಯಯನ ಅನುಷ್ಠಾನಗಳು ಈತನಿಗೆ ಆಧ್ಯಾತ್ಮಿಕ ಎತ್ತರವನ್ನು ನೀಡಿರುವಂತೆ ಈತನ ಲೋಕಸಂಚಾರವೂ ಜನಜೀವನದ ಗಾಢವಾದ ಅರಿವನ್ನು ಕೊಡಮಾಡಿದೆ. ತನ್ನ ಸಂಚಾರ ಕಾಲದಲ್ಲಿ ಈತ ಒಳ್ಳೆಯವರನ್ನು ಕಂಡಿದ್ದಾನೆ, ಕೆಟ್ಟವರನ್ನು ಕಂಡಿದ್ದಾನೆ. ಇದು ಸಹಜವೇ. ಆದರೆ ಇಲ್ಲಿ ವ್ಯಕ್ತವಾಗುವ ವೈಶಿಷ್ಟವೆಂದರೆ ಅವರವರಿಗೆ ಅವರವರ ಮಜುರೆ ಸಲ್ಲಿಸುವುದು ಈತನಿಗೆ ವಿರೋಧವಾಗಿ ಕಂಡದ್ದು. ಅವರವರ ಗುಣ ದೋಷಗಳನ್ನು ಕಾಣಿಸಿ ಅವನ್ನು ಅವರ ಮುಖದ ಮೇಲೆಯೇ ಅವನ್ನು ಎಸೆದು ಮುಂದೆ ಸಾಗಿದ್ದು. ಅಂಥ ಒಂದು ಸಾಮಾಜಿಕ ವಿಮರ್ಶೆಯ ಪ್ರಬುದ್ಧತೆಗೆ ಈ ಕೆಳಗಿನ ಹಾಡು ಶ್ರೇಷ್ಠ ನಿದರ್ಶನ.

ಬಾಯಿಲೊಂದು ಆಡ್ತೀರಿ । ಮನಸಿನ್ಯಾಗೊಂದು
ಮಾಡ್ತೀರಿ ।
ಬರದಿಟ್ಟದ್ದೋದಿ ಕೊಂಡು । ಭ್ರಾಂತಿಗೆಟ್ಟು
ತಿರಗುತ್ತೀರಿ ।
ಶೀಲವಂತರಂತೀರಿ । ಸುಳ್ಳೆ ಶೀಲ ಮಾಡ್ತೀರಿ ।
ಸಂತೆ ಸಂಗ ಕಟ್ಟಿಕೊಂಡು । ಸತ್ಯಾನಾಸಾಗಿ
ಹೋಗ್ತಿರಿ ॥

ಮುಸಲ್ಮಾನರಂತೀರಿ | ತುರ್ತಸುಂತಿ
ಮಾಡ್ತೀರಿ |
ಉಸರ ಬಿಟ್ಟು ಪಾತೆಕೊಟ್ಟು | ಬಿಸ್ಮಿಲ್ಲಂತೀರಿ ||
ಬ್ರಾಹ್ಮಣರಂತ ಹೇಳ್ತೀರಿ | ನೀರಾಗ ಮುಣಮುಣಿ
ಗೇಳ್ತೀರಿ|
ಬೋಳ್ ನೆತ್ತಿಗಿ ಗಂಟ್ಹಾಕಿ| ದೀಪ ಬಡ್ಕೊಂಡೋ
ಗ್ತೀರಿ |
ಸಾಧುರಂತ ಹೇಳ್ತೀರಿ | ಸೋಹಂಭಜನಿ
ಮಾಡ್ತೀರಿ |
ಅಡ್ಡ ದುಡ್ಡಿಗಿ ಆಸಿ ಮಾಡಿ | ಧಡ್ಡರಾಗಿ
ಹೋಗ್ತೀರಿ |
ಪಟ್ಟಚರಮೂರ್ತಿ ಅಂತೀರಿ | ಪಾರಮಾರ್ಥ
ಹೇಳ್ತೀರಿ |
ಪರನಾರಿ ಸ್ನೇಹವ ಮಾಡಿ | ಗುಡ್ಡದ ಮಹಾಂತಗ
ಹಾಕ್ತೀರಿ |

ಈ ಹಾಡಿನಲ್ಲಿ ಇಡೀ ಮಾನವ ಸಮಾಜದ ಚಿತ್ರ ಇದೆ. ಅದರ ಬಗ್ಗೆ ಅಸಮಾಧಾನವಿದೆ, ವಿಡಂಬನೆ ಇದೆ, ಹಾಸ್ಯ ಇದೆ ಇವೆಲ್ಲರ, ಹಿಂದೆ ಲೋಕನೀತಿ ಇದೆ, ತತ್ವವಿದೆ. ಆಚಾರದ ಬಗ್ಗೆ ತೀವ್ರ ಕಳಕಳಿ ಇದೆ. ಎಲ್ಲ ಸಮಾಜದಲ್ಲೂ ಎಲ್ಲ ಜನರಲ್ಲೂ ತತ್ವ ಮತ್ತು ಆಚರಣೆಗಳ ಮಧ್ಯ ಬಹು ದೊಡ್ಡ ಬಿರುಕು ಕಾಣಿಸಿಕೊಂಡಿದೆ. ತತ್ವವೆಂಥದೇ ಇರಲಿ, ಅದರ ಆಚರಣೆಯ ಫಲದ ಮೇಲೆ ಅದರ ಮಹತ್ತು ಅವಲಂಬಿಸಿದೆ.

ಎಂಥ ದೊಡ್ಡ ತತ್ವವಿದ್ದರೇನಾಯಿತು? ಅದು ಕೇವಲ ವೇದಿಕೆಗೆ ಮಾತ್ರ ಭೂಷಣ. ಆಚರಣೆ ತಪ್ಪಿದ ಎಲ್ಲ ಸಮಾಜದ ಜನರ ಬಗ್ಗೆಯೂ ಮಡಿವಾಳಪ್ಪ ಇಲ್ಲಿ ತನ್ನ ತೀವ್ರ ಅಸಮಾಧಾನವನ್ನು ತೋಡಿಕೊಂಡಿದ್ದಾನೆ.

ಅತೀಂದ್ರಿಯ ಅನುಭವವನ್ನು ಹೇಳುವಲ್ಲಿ ಈ ಕವಿ ಬಳಸುವ ಉಪಮೆ ನೀಡುವ ಉದಾಹರಣೆ, ಹೇಳುವ ದೃಷ್ಟಾಂತಗಳು ಜನಪದ ಬದುಕಿನಿಂದ ಎತ್ತಿಕೊಂಡವುಗಳಾಗಿರುವುದರಿಂದ ಅವು ತುಂಬ ಜನಪ್ರಿಯಗೊಂಡಿವೆ. ಮನಮುಟ್ಟುವಂತೆ ತತ್ವವನ್ನು ಹೇಳುವ ಕೌಶಲ ಆತನದೆ.

ಅತ್ತಿಯ ಮನಿಗ್ಹೋಗೋವಲ್ಲಿ | ಊರಾಗ |
ಮುತ್ಯಾವನ್ನಿಟ್ಟೀದಿ ಇಲ್ಲಿ |
ಚಿತ್ತಿಟ್ಟು ಮೈದುನ ಕರಿಲಾಕೆ | ಬಂದರೆ |
ನೆತ್ತಿಯ ನೆವನ ತೆಗೆದು ಮುಗ್ಗೀದಿ
ಹೊಯ್ಯಾಲಿ || ಪ ||

ದೇವರ ಹರಕಿಯ ಹೊತ್ತಿ | ಅಲ್ಲಲ್ಲಿ |
ಮೂವರ ಮೋಜಿನೊಳಿರ್ತಿ |
ಜಾವ ಜಾವಕ ಬಹಳ ಅರ್ತಿ | ದಿನದಿನ |
ಮೋಹದಿ ಮನಿಗೋಗಿ ಬರ್ತಿ || ೧ ||

ಎಂಟು ಮಂದಿಗಿ ಕೈಕೊಟ್ಟಿ | ಅವರಿಗಿ |
ನೆಂಟಸ್ತನವ ಮಾಡಿ ಬಿಟ್ಟಿ |

ಒಂಟಿ ಬಣ್ಣದ ಬಿಗಿದುಟ್ಟಿ । ಅವಗಾಗಿ ।
ಪುಟಾಣಿ ಕುಪ್ಪಸ ತೊಟ್ಟಿ ॥ ೨ ॥

ಇಲ್ಲಿ ಬಳಕೆಗೊಂಡ ಭಾವ, ಭಾಷೆ, ಉಪಮೆ, ಉದಾಹರಣೆಗಳು ನಮ್ಮ ಬದುಕಿನೊಂದಿಗೆ ತಳುಕು ಬಿದ್ದವುಗಳೇ. ಇವಕ್ಕೆ ಮಡಿವಾಳಸ್ಪರ್ಶಉಂಟಾಗಿ ಅತೀಂದ್ರಿಯತನ ಮೈದೋರಿದೆ. ಒಂದು ಮಟ್ಟದಲ್ಲಿ ಪ್ರಾಪಂಚಿಕ ವಿದ್ಯಮಾನ ವನ್ನು ಚಿತ್ರಿಸುತ್ತದೆ. ಅದನ್ನು ಸ್ವಲ್ಪಕೆದರಿ-ನೋಡುವವರಿದ್ದರೆ ಇನ್ನೊಂದು ಮಟ್ಟದಲ್ಲಿ ಆಧ್ಯಾತ್ಮಿಕ ನರುಗಂಪನ್ನೂ ಬೀರುತ್ತದೆ.

ಯಾವ ಮುಲಾಜಿಲ್ಲದೆ ಇದ್ದುದನ್ನು ಇದ್ದಂತೆ ನಿಷ್ಠುರವಾಗಿ ನುಡಿಯುವ ಈ ಕವಿ ಒಮ್ಮೊಮ್ಮೆ ಹತ್ತಿರ ಕರೆದು ಆತ್ಮೀಯವಾಗಿಯೂ ಹೇಳುತ್ತಾನೆ. ಮೃದುವಾಗಿ ಮೈದಡವಿ ಹೃದಯಕ್ಕೆ ಬೆಳಕು ಚೆಲ್ಲುತ್ತಾನೆ.

ಶಿವಶಿವಶಿವಶಿವ ಅನುವಲ್ಲಿ
ಸದ್ಗುರುವಿನ ಪಾದ ಹಿಡಿವಲ್ಲಿ
ಹೇಳಿದ ಮಾತ ನೀ ಕೇಳವಲ್ಲಿ
ನಿನ್ನ ಹೀನಗುಣದ ಬುದ್ಧಿ ಬಿಡವಲ್ಲಿ ॥ ಪ ॥

ಹಸಿದು ಬಂದ ಜಂಗಮ ಯೋಗಿ
ಕುಸ್ತಿಕಾಳಗ ಮಾಡ್ತೀದಿ ಕಾಗಿ
ಮುಂದಿನ ಮನಿಗ್ಹೋಗೆಂದಿ ಸಾಗಿ
ನಿನ್ಗ ಪುಣ್ಯಹ್ಯಾಂಗ ಸಿಕ್ಕಿತೊ ಗೂಗಿ ॥ ೧ ॥

ಪೂರ್ವ ಪುಣ್ಯದಿ ಗಳಿಸಿದಿ ರೊಕ್ಕ |
ನೀ ಮಾಡತೀದಿ ಬೆಳತನಕ ಲೆಕ್ಕ
ಕೊಳ್ಳಿ ತೊಗಂಡು ಕಳ್ಳ ಮನಿಹೊಕ್ಕ
ನೀ ಹೊರಳ್ಯಾಡದು ಕಂಡು ಶಿವನಕ್ಕ || ೨ ||

ಬರುವಾಗ ನೀ ಏನೂ ತಂದಿಲ್ಲ |
ಹೋಗುವಾಗ ಏನೂ ಒಯ್ಯೋಣಿಲ್ಲ |
ಕರ್ತೃಗುರು ಮಹಾಂತನೆ ಬಲ್ಲ
ಆತನ ಹೊರ್ತು ಮತ್ಯಾರಿಲ್ಲ || ೩ ||

ಇದು ಅನುಭಾವ ಕಾವ್ಯ. ಇಂಥ ತತ್ವಯುತ, ಶಕ್ತಿಯುತ, ಬೋಧಾತ್ಮಕ ಹಾಡಿನಿಂದ ಸುತ್ತ ಮುತ್ತ ಕವಿದ ಅಜ್ಞಾನದ ಕತ್ತಲೆಯನ್ನು ಕವಿ ಓಡಿಸಿದ. ಎಲ್ಲರಿಗೂ "ಶಿವಶಿವಶಿವಶಿವ" ಅನ್ನುವುದನ್ನು ರೂಢಿಸಿದ. ಬದುಕಿನ ಸಾರ ನಿಸ್ಸಾರಗಳನ್ನು ಅರಿತುಕೊಂಡು ಬಾಳು ಸಾಗಿಸಬೇಕೆಂದು ನಾಡಿಗೇ ಹೇಳಿ ಕೊಟ್ಟ.

ಈ ಜಗತ್ತು ಮಿಥ್ಯವಲ್ಲ. ಇದು ಸತ್ಯ. ಇಹದ ಬದುಕನ್ನು ನಡೆಸುತ್ತ ದೇವನೊಲಿಸುವುದೇನೂ ಅಸಾಧ್ಯವಲ್ಲ. ಅದು ಬಹು ಸುಲಭ, ಅದನ್ನು ಕವಿಯ ಮಾತಿನಲ್ಲೇ ಕೇಳಿರಿ;

ಏನಗಾಧೇನಗಾಧೇನಗಾಧೋ | ಹರ |
ನಿನ್ನೊಲಿಸುವದೇನಗಾಧೋ | ಹರಗುರು |
ನಿಮ್ಮೊಲಿಸುವದೇನಗಾಧೋ || ಪ ||

ಹಮ್ಮನಳಿದು ತಾ ಸುಮ್ಮನಿದ್ದರೆ

ಬ್ರಹ್ಮನೊಲಿಸುವುದೇನಗಾಧೋ | ಪರ |
ಬೊಮ್ಮನೊಲಿಸುವದೇನಗಾಧೋಽ... ...|| ೧ ||

—ಮಡಿವಾಳಪ್ಪನ ಹಾದಿ ಎಷ್ಟು ಸಮಂಜಸ! ಎಷ್ಟು ಸರಳ!

ತತ್ವವನ್ನು ಸಮಂಜಸವಾಗಿ ಸರಳೀಕರಿಸಿ ಹೇಳುವುದು ಕಲ್ಯಾಣದ ಶರಣರಿಗೆ ಮಾತ್ರ ಸಾಧ್ಯವಾಗಿತ್ತು. ಮಡಿವಾಳಪ್ಪನಿಗೂ ಈ ಕಲೆ ಅಪೂರ್ವವಾಗಿಯೇ ಸಿದ್ಧಿಸಿದೆ.

"ಸತ್ತು ತಿಳಿಯೊ ಗೊತ್ತು ಎತ್ತ ನೋಡಿದರಿತ್ತು" ಎಂಬ ಹಾಡಿನಲ್ಲಿ ಮಡಿವಾಳಪ್ಪ ಹೇಳುವ ಅನುಭಾವದ ಮಾದರಿ ಎಂಥದೆಂಬುದನ್ನು ನೋಡಿರಿ. ಆತನ ಕಾವ್ಯಗುಣ ಯಾವ ರೀತಿಯದೆಂಬುದನ್ನು ಅರಿಯಿರಿ :

ಮಾಡೇನಂದರಿಲ್ಲ | ನೋಡೇನಂದರಿಲ್ಲ |
ಸಾಕೆಂದರೆ ಸಲ್ಲ | ಬೇಕೆಂದರೆ ಬೆಲ್ಲ |

ಮುಂದುವರೆಯುತ್ತದೆ;

ಸತ್ತವಗ ಸಾವಿಲ್ಲ | ಹೊತ್ತವಗ ಜೀವಿಲ್ಲ |
ನೆತ್ತಿಯೊಳಗ ಒತ್ತಿ ನೋಡಿದರಿಲ್ಲ |

ಇದು ಅನುಭಾವಿಯೋರ್ವ ಆಧ್ಯಾತ್ಮದ ತುತ್ತತುದಿಯೇರಿ ನಿಂತು ಹೇಳಿದ ಮಾತು, ತೋರಿದ ನಿಲುವು, ಮೇಲುನೋಟಕ್ಕೆ ಇವು ಒಡಪುಗಳಂತೆ ಕಾಣುತ್ತವೆ. ಆದರೆ ಇವನ್ನು ಒಗೆದು ನೋಡಿದರೆ ಅರಿವು ಹರಿಯುತ್ತಿರುತ್ತದೆ. ಅನುಭಾವ

ಜಿಲ್ಲುತ್ತಿರುತ್ತದೆ. ಇವರು ಹೇಳಿದ ತತ್ವ ಜೀವನಕ್ಕೆ ಸುಲಭ ವಾಗಿ ಇಳಿದು ಬರುವಂಥದು. ನಿಜನಿಲುವಿನ ತತ್ವಾನುಭವ ವನ್ನು ಮಡಿವಾಳಪ್ಪನವರು ಜಾನಪದಕ್ಕೆ ನಿಲುಕಿಸಿದ್ದಾರೆ. ಅಲ್ಲ್ಯಾಕೊ ಹುಡುಕುತಿ? ಇಕೊ ಇಲ್ಲ್ಯದೋ ಮುಂಕುತಿ? ಎಂದು ಕೈಹಿಡಿದು ಕೊಡುತ್ತಾರೆ.

ಮಡಿವಾಳಪ್ಪನವರು ಹಾಡುಗಳನ್ನು ರಚಿಸಿದ್ದಲ್ಲದೆ ವಚನ ಗಳನ್ನು ಬರೆದಿದ್ದಾರೆ. ಅವನ್ನು "ನಿಜಲೀಲಾನುಭವ ವಚನ" ಗಳೆಂದು ಹೆಸರಿಸಿದ್ದಾರೆ. ಅಂದಂತೆ ಅವು ಸಂಪೂರ್ಣ ಆಧ್ಯಾ ತ್ಮಿಕ ಶ್ರೀಗಿರಿಯ ತುತ್ತತುದಿಯಲ್ಲಿ ವಿವಹರಿಸುತ್ತವೆ. ನಿಜ ಲೀಲೆಯ ಅನುಭವವನ್ನು ನಿಲುಕಿಸಿಕೊಂಡಿವೆ. ಆದರೆ ಅವನ್ನು ಬಿಚ್ಚಿ ಹೇಳುವರಿಲ್ಲವಾಗಿ-ಬರೆಯುವರಿಲ್ಲವಾಗಿ ಇನ್ನೂತನಕ ಜನರ ಹತ್ತಿರಕ್ಕೆ ಬಾರದೆ ಹಾಗೆಯೇ ಉಳಿದುಕೊಂಡಿವೆ. ಈ ವಚನಗಳು "ನಿರುಪಮ ನಿರಾಳ ಮಂತ್ರ ಭುಮಹಾಂತ ಯೋಗಿ" ಎಂಬ ಮುದ್ರಿಕೆಯಿಂದ ಬರೆಯಲ್ಪಟ್ಟಿವೆ. ಅವುಗಳನ್ನು ಓದಿ ದರೆ ಅಲ್ಲಮಪ್ರಭುಗಳ ಒಡಪಿನ ವಚನ ನೆನಪಿಗೆ ಬರುತ್ತವೆ.

ಶ್ರೀ ಮಹಾಂತೇಶ್ವರ ೧೦೮ ನಾಮಾವಳಿ ಗಾಳಿ ಪೂಜಿ ವಚನ ಅವರ ಇನ್ನುಳಿದ ಕೃತಿಗಳು. ಇವೆಲ್ಲ ಪ್ರಕಟವಾಗಿವೆ.

ಅವರ ಸಾಹಿತ್ಯವೆಂತೋ ಅವರ ಬದುಕೂ ಅನೇಕ ದಿವ್ಯ ಗಳಲ್ಲಿ ಹಾಯ್ದು ಬಂದುದಾಗಿತ್ತು. ಹೋರಾಟ ಅವರ ಬದು ಕಿನ ವೈಶಿಷ್ಟ್ಯ. ಹುಟ್ಟುತ್ತಲೇ ಹೋರಾಟಕ್ಕಿಳಿದವರವರು. ಹುಟ್ಟಿದ ಮೇಲೆ ಹೋರಾಟ ಸೃಷ್ಟಿಸಿಕೊಂಡವರು, ಸಿಕ್ಕ

ಬಹುದು. ಆದರೆ ಮಡಿವಾಳಪ್ಪನಂತೆ ಹುಟ್ಟುವ ಮುನ್ನವೇ ಹೋರಾಟವನ್ನು ಅಣಿಮಾಡಿಕೊಂಡು ಹುಟ್ಟಿದವರು ಸಿಕ್ಕುವುದಿಲ್ಲ. ಮಡಿವಾಳಪ್ಪನವರಿನ್ನೂ ತಾಯಿಯ ಉದರದಲ್ಲಿರುವಾಗಲೇ ಹೊರಗಿನ ವಾತಾವರಣ ಅವರ ವಿರುದ್ಧ ಮಸೆದಲಗಿನ ಒರೆಬಿಚ್ಚಿ ನಿಂತುಕೊಂಡಿತ್ತು. ಹುಟ್ಟುವ ಮುನ್ನ ಹುಟ್ಟಿನೊಂದಿಗೆ-ಅಂಟಿಬಂದ ಈ ಪ್ರತಿಕೂಲ ಪರಿಸ್ಥಿತಿಯನ್ನು ಮಡಿವಾಳಪ್ಪನವರು ಬಲು ಸಮರ್ಥವಾಗಿಯೇ ಬದುಕಿದರು. ಅವರ ಬದುಕಿನ ಮೂಲ ದ್ರವ್ಯ ಅಪ್ಪಟವಾಗಿ ಶರಣಧರ್ಮ ಪ್ರೇರಿತವಾದುದಾಗಿತ್ತು. ಅದಕ್ಕೆ ಹಿಂದಿನ ಕರ್ಮವಿಲ್ಲ, ಇಂದಿನ ದೋಷವಿಲ್ಲ, ನಾಳೆಯ ಭಯವಿಲ್ಲ. ಇಂಥ ಹೋರಾಟದಲ್ಲೂ ಈಡಾಡಿ ಬದುಕುವುದನ್ನು ಸಾಧ್ಯಮಾಡಿಕೊಂಡ ಮಡಿವಾಳಪ್ಪ ಸಾಮಾನ್ಯ ಚೇತನವಲ್ಲ. ಎಂಥ ದುಃಖ ದುಮ್ಮಾನಗಳಿಗೂ ಮುಖಕ್ಕೆ ಮುಖಕೊಟ್ಟು ಬದುಕಿದ ಮಹಾನುಭಾವರವರು.

ಅವರ ಹಾಡಿನಲ್ಲಿ ಪ್ರಾಣವಿದೆ. ಅಂತೆಯೇ ಇಂದಿಗೂ ಅವರ ಹಾಡುಗಳನ್ನು ಕೇಳಿದ ಹೃದಯ ಅವರುಂಡ ನೋವನ್ನು ತನ್ನದೆಂಬಂತೆ ಅನುಭವಿಸುತ್ತದೆ. ಅವರ ಅನುಭವವನ್ನು ತನ್ನದೆಂದು ಭ್ರಮಿಸುತ್ತದೆ. ಅವರ ಆತ್ಮದ ಕೂಗನ್ನು ತನ್ನಾತ್ಮದ ಕೂಗೆಂದು ಬಗೆಯುತ್ತದೆ.

ಒಟ್ಟಿನ ಮೇಲೆ "ಹೋರಾಟ" "ಶರಣತತ್ವ" ಇವುಗಳಿಗೆ ಬರೆದ ಭಾಷ್ಯವೇ ಕಡಕೋಳ ಮಡಿವಾಳಪ್ಪ.

## ಸಹಾಯಕ ಸಾಹಿತ್ಯ

೧. ಕೈವಲ್ಯ ವಾಕ್ಯಾಮೃತ -ಸಂ. ಗೌಡಪ್ಪ ಸಾಧು

೨. ಶಿವದಾಸ ಗೀತಾಂಜಲಿ -ಡಾ. ಎಲ್. ಬಸವರಾಜು

೩. ನಿಜಲೀಲಾನುಭವ ವಚನ -ಕಡಕೋಳ ಮಡಿವಾಳಪ್ಪ

****

# ಉಪನ್ಯಾಸ ಗ್ರಂಥಮಾಲೆಯ ಇತ್ತೀಚಿನ ಪ್ರಕಟನೆಗಳು

ಅರವಿಂದಾಶ್ರಮದ ಶ್ರೀಮಾತೆ —ಸ. ಸ. ಮಾಳವಾಡ

ಸಾಪೇಕ್ಷತಾ ವಾದ —ವ್ಹಿ. ಎಂ. ಕೋರವಾರ

ಸಂಕರಣ ಬೀಜೋತ್ಪಾದನೆ —ಎಂ. ಎಂ. ಹೊಸಮನಿ

ನರಗುಂದದ ಇತಿಹಾಸ —ಎಸ್.ಎಲ್. ಶಾಂತಕುಮಾರಿ

ಆಚಣ್ಣ ಕವಿಯ ವರ್ಧಮಾನ ಪುರಾಣ —ಬಿ. ಬಿ. ಮಹೀಶವಾಡಿ

ಕನ್ನಡದಲ್ಲಿ ತ್ರಿಪದಿ ಸಾಹಿತ್ಯ —ಎಸ್. ಎಸ್. ಕೋಟಿನ

ಕನ್ನಡ ಸಾಹಿತ್ಯದಲ್ಲಿ ದುರಂತ ದೃಷ್ಟಿ —ಎಚ್. ಜಿ. ಲೋಕೂರ

ದ್ರಾವಿಡ ಭಾಷೆಗಳು —ಸಂಗಮೇಶ ಸವದತ್ತಿಮಠ

ಪೋಲಿಯೋ ಮೈಲೈಟಿಸ್ —ಎಸ್·ಜಿ. ನಾಗಲೋಟಿಮಠ

ಕಾರ್ಮಿಕ ಸಮಸ್ಯೆಗಳು —ಎಸ್. ಜಿ. ಕರಬಂಟನಾಳ

---

ವ್ಯಾಸಂಗವಿಸ್ತರಣ — ಪ್ರಕಟನ ವಿಭಾಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೩